॥ ಶ್ರೀ ॥

ಫಲಜ್ಯೋತಿಷ್ಯ – ಜ್ಯೋತಿರ್ಮಾಲಾ

ನಕ್ಷತ್ರ ೯

# ಅಜ್ಞಾತ ಜಾತಕ ದರ್ಶನ

ಲೇಖಕರು :

**ಎನ್. ಕೆ. ಜೋಗಳೇಕರ**

ತೇಜಸ್ವಿನಗರ, ಧಾರವಾಡ – ೨

[ ಬೆಲೆ ರೂ.೫ – ೦೦ ]

# ಅರ್ಪಣೆ

ನನಗೆ ಬರವಣಿಗೆಯ ಹವ್ಯಾಸವನ್ನು ಹಚ್ಚಿ, ನನ್ನಿಂದ ಲೇಖನ
ಗಳನ್ನು ಬರೆಯಿಸಿ ಅವುಗಳನ್ನು ಪ್ರಕಟಿಸಿ ತಮ್ಮ ಅವಿರತ
ಪ್ರೋತ್ಸಾಹ ಧಾರೆಯನ್ನೆರೆದ ಆತ್ಮೀಯ ಮಿತ್ರರಾದ

**ಶ್ರೀ ಎಸ್. ವ್ಹಿ. ಪಾಟೀಲ**

( ಸಹಾಯಕ ಸಂಪಾದಕ "ಕರ್ಮವೀರ" )

ಇವರಿಗೆ ಪ್ರೀತ್ಯಾದರಗಳಿಂದ ಅರ್ಪಿತ

— ಲೇಖಕ

# ಪುಸ್ತಕ—ಪ್ರೇರಣೆ

ನನ್ನ ವೃತ್ತಿಯಲ್ಲಿ ನನಗೆ ಉದ್ಭವಿಸುವ ಬೃಹತ್ ಸಮಸ್ಯೆಗಳ ಪರಿಹಾರಕ್ಕೆ ನಾನು ಮಾಡುವ ಅಭ್ಯಾಸ, ವಿವೇಚನೆ, ವಿಶ್ಲೇಷಣೆಗಳ ರೀತಿಯ ನಾವೀನ್ಯತೆಯೇ ನನ್ನ ಅನೇಕ ಗ್ರಂಥಗಳಿಗೆ ಅನೇಕ ಸಲ ಪ್ರೇರಕಶಕ್ತಿಯಾಗಿ ಪರಿಣಮಿಸಿದೆ. "ಅಜ್ಞಾತ ಜಾತಕ ದರ್ಶನ"ದ ಉದ್ಭವವೂ ಒಂದು ಘಟನೆಯ ಫಲವೇ ಆಗಿದೆ. ಯಾವ ಸಮಸ್ಯೆಯನ್ನು ತಂದೆ ತಾಯಿಗಳು ಬಗೆಹರಿಸಲಾರರೋ ಅದನ್ನು ಜ್ಯೋತಿಷಿಯು ಬಗೆಹರಿಸಬೇಕಾದಾಗ ನನ್ನ ನಿರ್ಣಯದ ಮಹತ್ವ, ಜವಾಬ್ದಾರಿಯ ಹೊಣೆ, ನನ್ನ ಮೇಲೆ ಆ ತಂದೆ-ತಾಯಿಗಳಿಗಿದ್ದ ಅಚಲ ವಿಶ್ವಾಸಗಳ ಜಾಲದಲ್ಲಿ ನಾನೇ ಸಿಕ್ಕು ನಿಃಸ್ಸಹಾಯಕನಾದಾಗ "ಅಜ್ಞಾತ ಜಾತಕದರ್ಶನ"ದ ಮಹತ್ವ, ಅವಶ್ಯಕತೆಗಳ ಅರಿವಾಯಿತು. ಈ ಅರಿವೇ ಇಂದು ಈ ಹೊತ್ತಿಗೆಯ ರೂಪ ತಾಳಿದೆ. ನನ್ನ ಸಮಸ್ಯೆಯ ಪರಿಹಾರವನ್ನೂ ಒದಗಿಸಿಕೊಳ್ಳುವ ಉಪಕ್ರಮದಲ್ಲಿ ಇತರ ಜ್ಯೋತಿಷಿಗಳ ಸಮಸ್ಯೆಗಳನ್ನೂ ಇದರಿಂದ ಬಗೆಹರಿಸಲು ಸಾಧ್ಯವೆಂದು ಈ ಪುಸ್ತಕದ ಪ್ರಕಟಣೆಯ ಕಾರ್ಯಮಾಡಿದ್ದೇನೆ. ಇದು ವೃತ್ತಿಬಾಂಧವರಿಗೆ ಉಪಕಾರಿಯಾದರೆ ನನ್ನ ಶ್ರಮ ಸಾರ್ಥಕ.

ಒಂದು ಶ್ರೀಮಂತ ಕುಟುಂಬ. ಅವರಿಗೆ ಏಕಮಾತ್ರ ಪುತ್ರ. ಇವರ ನಾಲ್ಕು ವರುಷದ ಮಗು ಹೇಗೋ ತಪ್ಪಿಸಿಕೊಂಡುಬಿಟ್ಟಿತು. ಮಗು ಎಷ್ಟು ಹುಡುಕಿದರೂ ಸಿಗಲಿಲ್ಲ. ಪುತ್ರ ವಿರಹದ ವ್ಯಾಕುಲತೆಯಿಂದ ಅವರು ಅಚಲ ಮನಸ್ಸಿನಿಂದ ಎಡೆಬಿಡದೆ ಹುಡುಕುತ್ತಲೇ ಇದ್ದರು. ಹೀಗೆ ಹನ್ನೆರಡು ವರುಷಗಳು ಕಳೆದವು. ಪುತ್ರಾನ್ವೇಷಣೆಯಲ್ಲಿ ಅಕಸ್ಮಾತ್ತಾಗಿ ಒಮ್ಮೆ ಒಂದು ನಗರದಲ್ಲಿ ಅವರ ಹುಡುಗನ ಸುಳಿವು ಸಿಕ್ಕಿತು. ಆಗ ಆ ಹುಡುಗನಿಗೆ ಹದಿನಾರು ವರುಷ. ತಾಯಿಯ ಕರುಳು ಹೇಗೋ ಗುರುತಿಸಿ ಈತ ತನ್ನ ಮಗನೇ ಎಂದು ಸ್ವೀಕರಿಸಿದಳು. ಆದರೆ ತಂದೆಗೆ ಸಂದೇಹ!

ಅವನು ತನ್ನ ಮಡದಿಯ ನಿರ್ಣಯವನ್ನು ಒಪ್ಪಲು ಸಿದ್ಧನಿರಲಿಲ್ಲ. ಆ ಬಾಲಕ ತನ್ನ ಮಗನೆಂಬ ನಂಬಿಕೆ ಅವನಿಗೆ ಬರಲಿಲ್ಲ. ತನ್ನ ಆಸ್ತಿಯ ಆಸೆಗೆ ಯಾರೋ ಮಾಡಿದ ಸಂಚಿಗೆ ಈಕೆ ಬಲಿಯಾಗಿದ್ದಾಳೆಂಬ ಸಂಶಯ ಅವನನ್ನು

ಕಾಡುತ್ತಿತ್ತು. ಆ ಮಗುವಿನ ಜಾತಕ ಅವರಲ್ಲಿತ್ತು. ಗಂಡ-ಹೆಂಡಿರ ಈ ತಾಕಲಾಟಕ್ಕೆ ಬಹುಶಃ ಜ್ಯೋತಿಷಿಯು ಪರಿಹಾರವೇಕಾಗಿತ್ತೇನೋ ಜಾತಕ ದೊಡನೆ ಬಾಲಕನನ್ನು ನನ್ನ ಬಳಿ ಕರೆತಂದು, ನನ್ನ ನಿರ್ಣಯವನ್ನು ಹೇಳಲು ಕೇಳಿಕೊಂಡರು. ಇದು ಸುಲಭಸಾಧ್ಯವಾಗಿ ನಿರ್ಧರಿಸುವ ಪ್ರಶ್ನೆಯಾಗಿರಲಿಲ್ಲ. ಜಾತಕದ ಆಧಾರದ ಮೇಲೆ ಆ ಬಾಲಕನ ಮುಂಬರುವ ಕಾರ್ಯ, ವ್ಯಕ್ತಿತ್ವ, ಬೆಳವಣಿಗೆ, ಸ್ವಭಾವ, ನಡತೆಗಳನ್ನು ಗುರುತಿಸಿಯೇ ನನ್ನ ನಿರ್ಣಯ ಕೊಡಬೇಕಾಗಿತ್ತು. ಸಿದ್ಧವಾದ ಶಾಸ್ತ್ರೀಯ ಗ್ರಂಥಗಳ ಅಭಾವದಿಂದ ಸಿದ್ಧ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಪಾಪ! ತಂದೆ-ತಾಯಿಗಳ ಸಮಸ್ಯೆ ಸಮಸ್ಯೆಯೇ ಆಗಿ ಉಳಿಯಬೇಕಾಯಿತು. ನಾನು ನಿಸ್ಸಹಾಯಕನಾದೆ.

ಈ ಘಟನೆ ನನ್ನ ಮನಸ್ಸಿಗೆ ಅತೀವ ದುಃಖವನ್ನುಂಟುಮಾಡಿತು. ನನ್ನ ಆಗಿನ ನಿಃಸಹಾಯಕತೆಯೇ ನನ್ನನ್ನು ಒಂದು ಬಗೆಯ ಸಂಶೋಧನೆಗೆ ದಾರಿಮಾಡಿತು. ಈ ಘಟನೆಯಾಗಿ ಈಗ ಆರು ವರ್ಷಗಳು ಕಳೆದಿರಬೇಕು. ಅಂದಿನ ಆ ಸಮಸ್ಯೆಗೆ ಇನ್ನೂ ಅಂಥ ಅನೇಕ ಸಮಸ್ಯೆಗಳಿಗೆ ಈಗ ಪರಿಹಾರ ದೊರೆಯಬಹುದಾಗಿದೆ—ಈ ಪ್ರಸ್ತುತ ಕೃತಿ ಗಳಲ್ಲಿ.

'ಅಜ್ಞಾತ ಜಾತಕ ದರ್ಶನ'ವು ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯ ಒಂಬತ್ತನೇಯ ನಕ್ಷತ್ರವಾಗಿ ಪ್ರಕಾಶಗೊಂಡಿದೆ ಈ ಪುಸ್ತಕದ ಕರಡುಪ್ರತಿ ಯನ್ನು ತಯಾರಿಸಲು ನೆರವಾದ ಮಿತ್ರ ಶ್ರೀ ಶಹಾಜಿ ಶಿಂಧೆ ಹಾಗೂ ಕೆ. ಎನ. ಶರ್ಮಾ ಇವರಿಗೆ ನನ್ನ ಕೃತಜ್ಞತೆಗಳು.

ಕರ್ಮವೀರ ವಾರಪತ್ರಿಕೆಯ ಸಹಾಯಕ ಸಂಪಾದಕರಾದ ಮಿತ್ರ ಎಸ್. ವ್ಹಿ. ಪಾಟೀಲರು ಈ ಪುಸ್ತಕವನ್ನು ಅರ್ಪಣೆಯಾಗಿ ಸ್ವೀಕರಿಸಲು ನನಗೆ ಅನುಮತಿ ನೀಡಿದ್ದಾರೆ ಅವರಿಗೆ ಋಣಿ. ಮುದ್ರಣಕಾರ್ಯದಲ್ಲಿ ಸಹಕರಿಸಿದ ಘಾಣೇಕರ ಬಂಧುಗಳಿಗೆ ನನ್ನ ಕೃತಜ್ಞತೆಗಳು.

ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯ ಪ್ರಕಟಣೆಗಳನ್ನು ಆಸಕ್ತಿಯಿಂದ ಸ್ವಾಗತಿಸಿ ನನ್ನನ್ನು ಪ್ರೋತ್ಸಾಹಿಸುತ್ತಿರುವ ಓದುಗರಿಗೆ ನಾನು ಸದಾ ಋಣಿ.

ಧಾರವಾಡ — ತಮ್ಮ

೧೬–೨–೧೯೬೭ — ಎಸ್. ಕೆ. ಜೋಗಳೇಕರ

# ದ್ವಿತಿಯಾವೃತ್ತಿಯನ್ನು ಕುರಿತು

"ಅಜ್ಞಾತ ಜಾತಕ ದರ್ಶನ" ಪುಸ್ತಕದ ಪ್ರಥಮ ಮುದ್ರಣದ ಪ್ರತಿಗಳು ಮುಗಿದು ಏಳು ವರುಷಗಳಾಗಿದ್ದು ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರೂ ಸಹ ಈ ವರೆಗೆ ಪುನರ್ ಮುದ್ರಣ ಕೈಕೊಳ್ಳಲು ಸಾಧ್ಯವಾಗಿರಲಿಲ್ಲ ಆದರೆ ಕೃಪಾ ಮುದ್ರಣಾಲಯದ ಒಡೆಯರಾದ ಶ್ರೀ ಎಸ್. ಕೆ. ಪೋತ್ನಿಸರ ಸಹಕಾರದಿಂದ ಈದೀಗ ಪ್ರಕಟಿಸಲು ಸಾಧ್ಯವಾಯಿತು ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

ಎಸ್. ಕೆ. ಜೋಗಳೇಕರ

೧೯–೨–೧೯೮೧

ತೇಜಸ್ವಿನಗರ, ಧಾರವಾಡ–೨

॥ ಶ್ರೀ ॥

# ಅಜ್ಞಾತ ಜಾತಕ ದರ್ಶನ

## ವಿಷಯ ಪ್ರವೇಶ

"ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯ ಹೇಳುವದೆಂದರೆ ದೀಪ ವಿಲ್ಲದ ಮನೆಯಲ್ಲಿ ಕೋಣೆಗಳನ್ನು ಹುಡುಕಿದಂತೆ" ಎಂಬ ಉಕ್ತಿ, ಭವಿಷ್ಯದಲ್ಲಿ ಆಸಕ್ತಿ, ಜ್ಯೋತಿಷ್ಯದಲ್ಲಿ ನಂಬಿಕೆ ಇರುವ ಎಲ್ಲರನ್ನೂ ಜನ್ಮಪತ್ರಿಕಾನ್ವೇಷಣೆಗೆ ಹಚ್ಚುತ್ತದೆ. ಈ ಅನ್ವೇಷಣೆಯಲ್ಲಿಯು ಬಗೆ ನಾನಾ ವಿಧದಲ್ಲಿ ರೂಪಗೊಳ್ಳು ತ್ತದೆ ಕೆಲವರು ಜ್ಯೋತಿಯನ್ನು ಸಂಪೂರ್ಣವಾಗಿ ದೊರಕಿಸ ಬೇಕಾದರೆ ಕೆಲವರು ಇದ್ದ ಪಣತಿಗೆ ಎಣ್ಣೆ ಬತ್ತಿಯನ್ನು ತಂದು ಹೊತ್ತಿಸುವ ಕೆಲಸವನ್ನು ಮಾತ್ರ ಉಳಿಸಿರುತ್ತಾರೆ. ಮತ್ತೆ ಕೆಲವರು ಎಣ್ಣೆಯನ್ನೋ— ಅಥವಾ ಬತ್ತಿಯನ್ನೋ ದೊರಕಿಸಲೆತ್ನಿಸಿದರೆ, ಇನ್ನು ಕೆಲವರು ಕಡ್ಡಿಪೆಟ್ಟಿಗೆ ಯನ್ನು ಹುಡುಕಬೇಕಾಗುತ್ತದೆ. ಅಂತೂ ಹೇಗೂ ದೀಪವಂತೂ ಬೇಕೇಬೇಕು. ಹಾಗೆಯೇ ಜನ್ಮಪತ್ರಿಕಾನ್ವೇಷಣದಲ್ಲಿಯೂ ಬಗೆಬಗೆಯ ರೀತಿಗಳುಂಟು. ಕೆಲವರಲ್ಲಿ ಜನ್ಮಪತ್ರಿಕೆ ತಯಾರಿದ್ದರೆ. ಮತ್ತೆ ಕೆಲವರಲ್ಲಿ ಅರ್ಧಮರ್ಧ ತಯಾ ರಿರುತ್ತದೆ. ಮತ್ತೆ ಕೆಲವರು ಜನ್ಮತಾರೀಖನ್ನು ಮಾತ್ರ ನೆನಪಿಟ್ಟಿರುತ್ತಾರೆ. ಇನ್ನು ಕೆಲವರಿಗೆ ಜನ್ಮವೇಳೆ ಮಾತ್ರ ಗೊತ್ತಿರುತ್ತದೆ ಇವರೆಲ್ಲರೂ ಭವಿಷ್ಯದಲ್ಲಿ ಆಸಕ್ತಿ ಉಳ್ಳವರಿರುತ್ತಾರೆ. ಯಾವ ವಿಷಯ ಹೇಗೆ ಇದ್ದರೂ ಜ್ಯೋತಿಷಿ ಯಂತೂ ಯೋಗ್ಯ ಜನ್ಮಪತ್ರಿಕೆ ಇಲ್ಲದೇ ಭವಿಷ್ಯವನ್ನು ಯೋಗ್ಯ ರೀತಿಯಲ್ಲಿ ಹೇಳಲಾಗುವದಿಲ್ಲವಾದ್ದರಿಂದ ಇದು ಬಗೆಹರಿಸಲಾಗದ ಸಮಸ್ಯೆಯೇ ಆಗಿರು ತ್ತದೆ. ಈ ವಿಷಯಗಳೇ "ಅಜ್ಞಾತ ಜಾತಕದರ್ಶನ"ದ ಉದ್ಭವಕ್ಕೆ ಕಾರಣ.

"ಅಜ್ಞಾತ ಜಾತಕದರ್ಶನ"ದಲ್ಲಿ ಜನ್ಮಪತ್ರಿಕಾ ತಯಾರಿಕೆಯಲ್ಲಿ. ಅನೇಕ ಸಲ ಕಂಡುಬರುವ ಶಾಸ್ತ್ರೀಯ ತೊಡಕುಗಳ. ನಿವಾರಣೋಪಾಯವನ್ನು

ವಿವೇಚಿಸಲಾಗಿದೆ. ಮೊದಲನೆಯದಾಗಿ, ಸಂದಿಗ್ಧ ಜಾತಕಗಳ ತೊಡಕು ಈ ಸಂದಿಗ್ಧ ಜಾತಕಗಳು ಅನೇಕ ವಿಧಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅವು ಈ ಕೆಳಗಿನಂತಿವೆ:

೧) ೫-೧೦ ನಿಮಿಷಗಳ ಅಂತರವಿದ್ದಾಗ ಸಂದಿಗ್ಧ ಲಗ್ನ, ರಾಶಿ, ಚರಣಗಳಿಂದಾಗಿ ಉದ್ಭವಿಸುವ ಎರಡು ಜಾತಕಗಳಿಗೆ ಎಡೆ ಕೊಡುವ ಒಂದು ಪ್ರಕಾರ.

೨) ಎರಡನೇ ಮಹಾಯುದ್ಧದ ಕಾಲದಲ್ಲಿ ಬ್ರಿಟನ್ನಿನ ಮಾಜೀ ಪ್ರಧಾನಿ ದಿ। ಚರ್ಚಿಲ್‌ರು ತಮ್ಮ ಯುದ್ಧತಂತ್ರದ ಅನುಕೂಲತೆಗಾಗಿ ೧-೯-೧೯೪೨ ರಿಂದ ೧೫-೧೦-೧೯೪೫ರ ವರೆಗೆ ಪರಿಸ್ಥಿತಿಯ ಮಹತ್ವದ ಆಲೋಚನೆಗಾಗಿ ಈಗಿನ ಸ್ಟ್ಯಾಂಡರ್ಡ್ ಟಾಯಿಮನ್ನು ಒಂದು ಗಂಟೆ (ತಾಸು) ಮುಂದಿಟ್ಟು ಅದನ್ನು ಕಾನೂನಿನಲ್ಲಿ ತಂದು ಮೂರು ವರುಷಗಳ ನಂತರ ರದ್ದು ಮಾಡಿದರು. ಈ ವೇಳಾಂತರ ಜ್ಯೋತಿಷಿಗಳಿಗೆ ಅನೇಕ ಸಮಸ್ಯೆಗಳನ್ನು ತಂದೊಡ್ಡಿದೆ. ಈ ಅವಧಿಯಲ್ಲಿ ಹುಟ್ಟಿದ ಕೆಲವರು ತಿದ್ದಿದ ವೇಳೆ (ಹೊಸ ವೇಳೆ)ಯನ್ನೇ ಗುರ್ತು ಹಾಕಿಕೊಂಡಿರುತ್ತಾರೆ. ಕೆಲವರು ಆದೇ ವೇಳೆಯನ್ನು ಗುರುತಿಸಿಕೊಂಡಿರುತ್ತಾರೆ (ಹಳೆಯ ವೇಳೆ) ಇದರಿಂದಲೂ ಎರಡು ಜಾತಕಗಳಿಗೆ ಅವಕಾಶ ಒಂದೊದಗುತ್ತದೆ.

೩) ಮೂರನೆಯದಾಗಿ ಕೆಲವು ಸಲ ವಧು-ವರರ ಜಾತಕಗಳ ಸಾಮ್ಯತ್ವವನ್ನು ಸಾಧಿಸಲು ನಿರ್ಮಾಣವಾಗುವ ಪೊಳ್ಳು ಜಾತಕಗಳ ಹಾವಳಿ. ಒಂದೆಡೆ ಶಾಲಾ ಪ್ರವೇಶಕ್ಕಾಗಿ ಮತ್ತು ನೌಕರಿಯ ಭರ್ತಿಗಾಗಿ ರಚಿಸಲ್ಪಡುವ ಕೃತ್ರಿಮ ಜಾತಕದ ಹಾವಳಿ ಇನ್ನೊಂದೆಡೆಗೆ ಇರುತ್ತದೆ.

ಇದಲ್ಲದೆ ರಾಶಿ, ನಕ್ಷತ್ರ, ಚರಣಗಳಲ್ಲಿ ವಿಭಿನ್ನತೆಯಾಗಲು ಈಗಿನ ಪಂಚಾಂಗಗಳೂ ಕೆಲವೊಮ್ಮೆ ಕಾರಣವಾಗಿವೆ. ಬೇರೆ ಬೇರೆ ಪಂಚಾಂಗಗಳಲ್ಲಿ ಒಂದೇ ದಿನದ ನಕ್ಷತ್ರ ಚರಣ ಗಣನೆಗಳು ಬೇರೆ ಬೇರೆ ಆಗಿರುತ್ತವೆ. ಅನೇಕ ವೇಳೆ ಒಂದು ಮತ್ತೊಂದರ ವಿರುದ್ಧವಾಗಿರುತ್ತದೆ. ಇಂತಹದರಲ್ಲಿ ಯಾವ ಪಂಚಾಂಗ ಸರಿಯೆಂದು ನಿರ್ಣಯಿಸುವುದೂ ಕಠಿಣ.

ಇಂಥ ಪ್ರಸಂಗಗಳಲ್ಲಿ ಈ ಎರಡೂ ಜಾತಕಗಳಲ್ಲಿ ಯಾವ ಜಾತಕವನ್ನು ಅನುಸರಿಸಿ ಭವಿಷ್ಯಕಥನ ಮಾಡಬೇಕೆಂದು ನಿರ್ಧರಿಸುವುದು ಸಮಸ್ಯ

ತ್ರೀವ್ರೂ ಜಟಿಲವೂ, ಕ್ಲಿಷ್ಟವೂ ಆಗಿರುತ್ತದೆ. ಹಾಗೂ ಈ ಶಾಸ್ತ್ರೀಯ ತೊಡಕುಗಳಿಂದ ಫಲನಿರ್ಣಯಕ್ಕೆ ಅನೇಕ ಸಲ ಧಕ್ಕೆಯಾಗಿ ಜ್ಯೋತಿರ್ವಿದರಿಗೆ ಕಳಂಕ ತರುವಂತಹ ಈ ತೊಡಕುಗಳನ್ನು ದೂರುಮಾಡಿ ಜ್ಯೋತಿಷ್ಯಶಾಸ್ತ್ರಕ್ಕೆ ಸೇವೆಸಲ್ಲಿಸುವ ಪ್ರಯತ್ನವೇ ಈ "ಅಜ್ಞಾತ ಜಾತಕದರ್ಶನ".

೧

## ಜನ್ಮದಿನವನ್ನು ಹೇಗೆ ನಿರ್ಧರಿಸಬೇಕು?

"ಅಜ್ಞಾತಜಾತಕ ದರ್ಶನ"ದ ಈ ಪ್ರಥಮ ಪ್ರಕರಣದಲ್ಲಿ ಯಾರೂ ಬ್ಬರ ಜನ್ಮದಿನದ ನಿರ್ಣಯದ ಪ್ರಶ್ನೆಯನ್ನು ವಿವೇಚಿಸಲಾಗಿದೆ. ತನ್ನ ಜನ್ಮ ದಿನದ ಬಗ್ಗೆ ನಿರ್ದಿಷ್ಟ ಮಾಹಿತಿ ಇಲ್ಲದ ಪೃಚ್ಛಕನ ಜನ್ಮದಿನ ನಿರ್ಣಯದ ಸಮಸ್ಯೆ ಕ್ಲಿಷ್ಟವಾದರೂ ಅದಕ್ಕೆ ಕೆಲವು ಸೂತ್ರಗಳನ್ನು ಅನುಸರಿಸಿದರೆ ಕಾರ್ಯ ಸಿದ್ಧಿಯಾಗುತ್ತದೆ ಎಂದು— ಇದರಿಂದ ನಿರ್ಧರಿಸಬಹುದು. ಆದುದರಿಂದ ಈ ಸಮಸ್ಯಾ ಪರಿಹಾರಕ್ಕೆ ಮಾಡಬೇಕಾದ ತಯಾರಿಕೆ ಅನುಸರಿಸಬೇಕಾದ ಮಾರ್ಗ, ಪಾಲಿಸಬೇಕಾದ ತತ್ವ ಇವುಗಳ ಆವಿರ್ಭಾವವೇ ಈ ಪ್ರಕರಣ.

ಪೃಚ್ಛಕನಿಗೆ ಸರಿಯಾದ ಜನ್ಮದಿನಾಂಕ ಗೊತ್ತಿರದಿದ್ದರೆ ಅವನು ಜನ್ಮಿಸುವ ಪೂರ್ವದಲ್ಲಿ ಅಥವಾ ಜನನವಾದ ನಂತರ ಯಾವ ಹಬ್ಬ ಎಷ್ಟು ದಿನ ಮೊದಲು ಅಥವಾ ನಂತರ ಇತ್ತು ಎಂದು ವಿಚಾರಿಸಬೇಕು. ಬಳಿಕ ಅವನಿಂದ ನಿರ್ದಿಷ್ಟವಾದ ಉತ್ತರ ಈ ಕೆಳಗಿನಂತೆ ಬರುತ್ತದೆ:

ಯುಗಾದಿ, ಗಣೇಶಚತುರ್ಥಿ, ವಿಜಯಾದಶಮಿ, ದೀಪಾವಳಿ, ಗೋಕುಲಾಷ್ಟಮಿ, ನಾಗಪಂಚಮಿ, ಸೀಗೆಹುಣ್ಣಿಮೆ, ಶಿವರಾತ್ರಿ, ಹೋಳಿಹುಣ್ಣಿಮೆ, ಈ ಮುಂತಾದ ಹಬ್ಬಗಳು ಇಂತಿಷ್ಟು ದಿನ (ಜನಿಸುವ ಅವಧಿಯ) ಓಂದೆ ಅಥವಾ ಮುಂದೆ ಇದ್ದವು ಎಂದು ಸ್ಥೂಲಮಾನದಿಂದ ತಿಳಿಯಬಹುದು.

ಈ ಮೇಲಿನ ವಿಷಯಗಳಿಂದ ನಮಗೆ ನಿಶ್ಚಿತವಾದ ತಿಂಗಳು ಗೊತ್ತಾಗುತ್ತದೆ. ಉದಾ— ಯಾವನೊಬ್ಬನು ದೀಪಾವಳಿ ಪಾಡ್ಯಯ ಐದಾರು ದಿನ ಮೊದಲು ಇಲ್ಲವೆ ನಂತರ ಜನಿಸಿರುವನೆಂದು ತಿಳಿದರೆ ನಮಗೆ ನಿಶ್ಚಿತ

ವಾಗಿ ಅವನ ಜನನ ಅಕ್ಟೋಬರ ಇಲ್ಲವೇ ನವ್ಹೆಂಬರ ತಿಂಗಳಲ್ಲಿ ಎಂದೂ ಅಥವಾ ಆಶ್ವೀನ, ಕಾರ್ತಿಕ ಮಾಸಗಳೆಂದೂ ತಿಳಿಯುತ್ತದೆ.

. ಆ ಬಳಿಕ ಯಾವ ವಾರದಲ್ಲಿ ಜನನವಾಗಿದೆ ಎಂದು ಕೇಳಿದರೆ ಅವನ ತಂದೆ ತಾಯಿಗಳಿಂದ ಯಾವದೊಂದು ವಾರದ ಕಲ್ಪನೆ ಬರುವದು. ನಂತರ ಅವನ ಸರ್ಟಿಫಿಕೇಟುಗಳ ವರ್ಷ ಅಥವಾ ಓರಿಗೆಯ ಗೆಳೆಯರ ವರ್ಷಗಳ ಮೇಲಿಂದ ಎರಡು ಮೂರು ವರ್ಷಗಳ ಹಿಂದೆ ಮುಂದೆ ನೋಡಿ ನಿಶ್ಚಿತವಾದ ವಾರ, ತಿಂಗಳು, ದಿನಾಂಕ ಇಸ್ವಿಸನ್ ಗೊತ್ತಾಗುತ್ತದೆ.

### ಯಾರದೇ ಒಬ್ಬರ ರಾಶಿಗಳನ್ನು ಹೇಗೆ ಕಂಡುಹಿಡಿಯಬೇಕು ?

ಜನ್ಮ ವರ್ಷದ ಪಂಚಾಂಗವನ್ನೂ ಕೂಡ ನೋಡದೇ ಯಾರೊಬ್ಬರ ಜನ್ಮ ರಾಶಿಯನ್ನು ಲೋಕತಾಳೆಯ ಲೆಕ್ಕದಿಂದ ಕಂಡುಹಿಡಿಯಲು ಬರುತ್ತದೆ.

ಯಾರೊಬ್ಬ ವ್ಯಕ್ತಿಯು ಜನಿಸುವ ಪೂರ್ವದಲ್ಲಿ ಯಾವ ಹಬ್ಬ ಎಷ್ಟು ದಿನವಿತ್ತೆಂದು ವಿಚಾರಿಸಿದರೆ ಜನ್ಮರಾಶಿಗಳು ತಿಳಿಯುತ್ತವೆ.

ಸಾಮಾನ್ಯವಾಗಿ ಭಿನ್ನ ಭಿನ್ನ ಹಬ್ಬಗಳು ನಿರ್ದಿಷ್ಟವಾದ ನಕ್ಷತ್ರ ರಾಶಿಗಳಲ್ಲಿ ಬರುತ್ತವೆ. ಉದಾ— ಶ್ರವಣಾ ನಕ್ಷತ್ರ ದಿನ ವಿಜಯಾದಶಮಿ ಹಬ್ಬವು ಇರುವದು ಎಂಬುದು ಎಲ್ಲರಿಗೂ ತಿಳಿದ ವಿಷಯ. ಶ್ರವಣಾ ನಕ್ಷತ್ರವು ಮಕರ ರಾಶಿಯಲ್ಲಿ ಬರುತ್ತದೆ. ಆದ್ದರಿಂದ ವಿಜಯದಶಮಿ ದಿನ ಯಾವದೇ ವರ್ಷ ಜನ್ಮತಾಳಿದ ವ್ಯಕ್ತಿಯ ಜನ್ಮರಾಶಿಯು "ಮಕರ"ವಾಗುವದು. ಒಮ್ಮೊಮ್ಮೆ ಈ ಹಬ್ಬಗಳು ಹಿಂದು ಮುಂದಿನ ರಾಶಿಯಲ್ಲಿ ಬರುತ್ತವೆ. ಉದಾಹರಣೆಗಾಗಿ ಧನಿಷ್ಠಾ ನಕ್ಷತ್ರವಿರುವ ವಿಜಯದಶಮಿ ದಿನ ಯಾರೊಬ್ಬ ವ್ಯಕ್ತಿಯ ಜನನ ವಾಗಿದ್ದರೆ ಮಕರ ಇಲ್ಲವೆ ಕುಂಭವು ಆ ವ್ಯಕ್ತಿಯ ಜನ್ಮರಾಶಿಯಾಗುತ್ತದೆ. ಏಕೆಂದರೆ ಧನಿಷ್ಠಾ ನಕ್ಷತ್ರದ ಮೊದಲಿನ ಎರಡು ಚರಣಗಳು ಮಕರ ರಾಶಿಯದೂ, ಕೊನೆಯ ಎರಡು ಚರಣಗಳು ಕುಂಭ ರಾಶಿಯವೂ ಇರುತ್ತವೆ. ಇಂಥ ಪ್ರಸಂಗದಲ್ಲಿ ಮಕರ ರಾಶಿಯೋ ಕುಂಭ ರಾಶಿಯೋ ಎಂಬ ಸಂದಿಗ್ಧ ಪರಿಸ್ಥಿತಿ ಇದ್ದರೂ ಕೂಡ ಈ ಎರಡೇ ರಾಶಿಗಳಲ್ಲಿಯ ನಿರ್ಣಯವನ್ನು ಮಾಡಲು ಅಷ್ಟೇನೂ ಕಠಿಣ ಸಮಸ್ಯೆಯಾಗುವದಿಲ್ಲ. ಇವೆಲ್ಲವುಗಳ ವಿವೇಚನೆಯನ್ನು ಮೂರನೆಯ ಪ್ರಕರಣದಲ್ಲಿ ಕೊಡಲಾಗಿದೆ.

ಇನ್ನು ಆಯಾ ಹಬ್ಬಗಳ ಹಿಂದೆ ಮುಂದೆ ಇದ್ದ ದಿನಗಳಿಂದ ಜನ್ಮ ರಾಶಿಗಳನ್ನು ಈ ಕೆಳಗಿನಂತೆ ತಿಳಿಯಕೊಳ್ಳಲು ಬರುತ್ತದೆ. ಉದಾಹರಣೆಗಾಗಿ: ಯಾರೊಬ್ಬ ವ್ಯಕ್ತಿಯ ಜನನ ವಿಜಯಾದಶಮಿಯ ಮೊದಲು ಎಂಟು ದಿನ ಆಗಿದೆ ಎಂದು ತಿಳಿಯಿರಿ. ಸಾಮಾನ್ಯವಾಗಿ ವಿಜಯಾದಶಮಿ ಶ್ರವಣಾ ನಕ್ಷತ್ರದ ದಿನ ಬರುವದು. ಒಮ್ಮೊಮ್ಮೆ ಧನಿಷ್ಠಾ ನಕ್ಷತ್ರದ ದಿನ ವಿಜಯದಶಮಿ ಬರುವದು ಎಂಟು ದಿನ ಮೊದಲು ಅಂದರೆ ಸ್ವಾತಿ ಇಲ್ಲವೇ ವಿಶಾಖಾ ನಕ್ಷತ್ರವಾಗುವದು. ಆದ್ದರಿಂದ ತುಲಾ ಇಲ್ಲವೆ ವೃಶ್ಚಿಕ ಆ ವ್ಯಕ್ತಿಯ ಜನ್ಮರಾಶಿ ಎಂದು ತಿಳಿಯುತ್ತದೆ. ಇದರಂತೆಯೇ ವಿಜಯಾದಶಮಿ ಆದ ಎಂಟನೇ ದಿನ ಯಾರೊಬ್ಬನ ಜನನವಾಗಿದೆ ಎಂದು ತಿಳಿದರೆ ಭರಣಿ ಇಲ್ಲವೇ ಕೃತ್ತಿಕೆ ಅವರ ನಕ್ಷತ್ರವೆಂದೂ ಮೇಷ ಇಲ್ಲವೇ ವೃಷಭ ಅವರ ಜನ್ಮರಾಶಿ ಎಂದೂ ತಿಳಿಯುತ್ತದೆ.

ಒಮ್ಮೊಮ್ಮೆ ಪರಮಾತ್ಮನ ಜಯಂತಿ ದಿನದ ಮೇಲಿಂದಲೂ, ಸಾಧು ಸತ್ಪುರುಷರ ಜಯಂತಿಯ ಮೇಲಿಂದಲೂ, ಜಾತ್ರೆಗಳ ರಥೋತ್ಸವಗಳ ದಿನದ ಮೇಲಿಂದಲೂ ರಾಶಿ ನಕ್ಷತ್ರಗಳನ್ನು ಕಂಡುಕೊಳ್ಳಲು ಬರುತ್ತದೆ. ಉದಾಹರಣೆಗಾಗಿ ಶೇಷಾಚಲ ಸ್ವಾಮಿಗಳ ಜಯಂತಿಯು ಚೈತ್ರ ವದ್ಯ ಪಂಚಮಿ ಇರುವದರಿಂದ ಮೂಲಾ ನಕ್ಷತ್ರದ ಧನುರಾಶಿ ಎಂದೂ ತಿಳಿಯುತ್ತದೆ. ಇದರಂತೆಯೇ ಬಸವೇಶ್ವರ ಜಯಂತಿ ರೋಹಿಣೀ ನಕ್ಷತ್ರ, ವೃಷಭ ರಾಶಿಯಲ್ಲಿ ಇರುತ್ತದೆ. ರಾಷ್ಟ್ರೀಯ ದಿನಗಳಾದ, ಆಗಸ್ಟ ೧೫, ಗಣರಾಜ್ಯ ದಿನವು ಜನೇವರಿ ೨೬ ಎಂದೂ ತಿಳಿಯುತ್ತದೆ. ಹೀಗೆ ಯಾರೊಬ್ಬನ ಜನ್ಮರಾಶಿಯನ್ನು ಕಂಡುಕೊಳ್ಳಲು ಬರುತ್ತದೆ.

**ಯಾವ ಹಬ್ಬದಲ್ಲಿ ಜನಿಸಿದರೆ ಯಾವ ಯಾವ ನಕ್ಷತ್ರ, ರಾಶಿಗಳಾಗುತ್ತವೆ ಎಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ—**

೧) ಯುಗಾದಿ:— ಚೈತ್ರ ಮಾಸದ ಶುಕ್ಲ ಪಕ್ಷದ ಪ್ರತಿಪದಾ ದಿನ ಈ ಹಬ್ಬವು ಬರುತ್ತದೆ ಸಾಮಾನ್ಯವಾಗಿ ಅಂದು ಉ. ಭಾ. ಇಲ್ಲವೇ ರೇವತೀ ನಕ್ಷತ್ರವು ಇರುತ್ತದೆ. ಒಮ್ಮೊಮ್ಮೆ ಅಶ್ವಿನೀ ನಕ್ಷತ್ರವೂ ಬರುತ್ತದೆ ಆದುದರಿಂದ ನಿತ್ಯ ಚಂದ್ರನು ಮೀನ ಇಲ್ಲವೇ ಮೇಷ ರಾಶಿಯಲ್ಲಿ ಇರುತ್ತಾನೆ.

೨) ಶ್ರೀರಾಮನವಮಿ:— ಈ ಹಬ್ಬವು ಚೈತ್ರ ಶುದ್ಧ ನವಮಿಯ ದಿನ ಬರುತ್ತದೆ. ಅಂದು ಹೆಚ್ಚಾಗಿ ಪುನರ್ವಸು, ಇಲ್ಲವೆ ಪುಷ್ಯ ನಕ್ಷತ್ರವಿರುತ್ತದೆ ನಿತ್ಯ ಚಂದ್ರನು ಹೆಚ್ಚಾಗಿ ಮಿಥುನ ಇಲ್ಲವೆ ಕರ್ಕ ರಾಶಿಯಲ್ಲಿರುತ್ತಾನೆ.

೩) ಹನುಮಜಯಂತಿ ಮತ್ತು ದವನದ ಹುಣ್ಣಿವೆ:— ಚೈತ್ರಶುದ್ಧ ಪೌರ್ಣಿಮೆಯ ದಿನ ಈ ಹಬ್ಬವು ಬರುತ್ತದೆ. ಅಂದು ಹೆಚ್ಚಾಗಿ ಹಸ್ತಾ ಇಲ್ಲವೇ ಚಿತ್ತಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಕನ್ಯಾ ಇಲ್ಲವೇ ತುಲಾ ರಾಶಿಯಲ್ಲಿರುತ್ತಾನೆ.

೪) ಅಕ್ಷತ್ರದಿಗೆ ಅಮವಾಸ್ಯೆ :— ಚೈತ್ರ, ಕೃಷ್ಣ ಮೂವತ್ತನೇ ದಿನ ಈ ಹಬ್ಬ ಬರುತ್ತದೆ. ಅಂದು ಅಶ್ವಿನಿ ಇಲ್ಲವೇ ಭರಣಿ ನಕ್ಷತ್ರವು ಇರುತ್ತದೆ. ನಿತ್ಯ ಚಂದ್ರನು ಮೇಷ ರಾಶಿಯಲ್ಲಿರುತ್ತಾನೆ.

೫) ಅಗೀಹುಣ್ಣಿವೆ ಇಲ್ಲವೆ ಗಣೇಶಹುಣ್ಣಿಮೆ:— ವೈಶಾಖ ಶುದ್ಧ ಪೌರ್ಣಿಮೆಯ ದಿನ ಈ ಹಬ್ಬವು ಬರುತ್ತದೆ. ಸ್ವಾತಿ ಇಲ್ಲವೆ ವಿಶಾಖಾ ನಕ್ಷತ್ರ ಅಂದು ಇರುತ್ತದೆ. ನಿತ್ಯ ಚಂದ್ರನು ತುಲಾ ಇಲ್ಲವೆ ವೃಶ್ಚಿಕ ರಾಶಿಯಲ್ಲಿರುತ್ತಾನೆ.

೬) ಬಾದಾಮಿ ಅಮವಾಸ್ಯೆ :— ವೈಶಾಖ ಕೃಷ್ಣ ಮೂವತ್ತನೇ ತಿಥಿಗೆ ಈ ಹಬ್ಬ ಬರುತ್ತದೆ. ಕೃತ್ತಿಕಾ ರೋಹಿಣಿ ನಕ್ಷತ್ರ ಅಂದು ಇರುತ್ತದೆ.

೭) ವಟಪೌರ್ಣಿಮಾ ಇಲ್ಲವೇ ಕಾರಹುಣ್ಣಿವೆ:— ಈ ಹಬ್ಬವು ಜ್ಯೇಷ್ಠ ಶುದ್ಧ ಹುಣ್ಣಿವೆಯ ದಿನ ಬರುತ್ತದೆ. ಅಂದು ಹೆಚ್ಚಾಗಿ ಅನುರಾಧಾ ಇಲ್ಲವೆ ಜ್ಯೇಷ್ಠಾ ನಕ್ಷತ್ರವಿರುತ್ತದೆ. ಚಂದ್ರನು ಹೆಚ್ಚಾಗಿ ವೃಶ್ಚಿಕ ರಾಶಿಯಲ್ಲಿರುತ್ತಾನೆ.

೮) ಮಣ್ಣೆತ್ತಿನ ಅಮಾವಾಸ್ಯೆ:— ಜ್ಯೇಷ್ಠ ಬಹುಳ ಅಮಾವಾಸ್ಯೆಯ ದಿನ ಈ ಹಬ್ಬವು ಬರುತ್ತದೆ. ಹೆಚ್ಚಾಗಿ ಮೃಗಶಿರಾ ಇಲ್ಲವೆ ಆರಿದ್ರಾ ನಕ್ಷತ್ರ ಅಂದು ಇರುತ್ತದೆ. ಚಂದ್ರನು ವೃಷಭ ಇಲ್ಲವೆ ಮಿಥುನ ರಾಶಿಯಲ್ಲಿರುತ್ತಾನೆ.

೯) ಆಷಾಢ ಏಕಾದಶಿ:— ಆಷಾಢ ಶುದ್ಧ ೧೧ನೇ ತಿಥಿಗೆ ಈ ಹಬ್ಬವು ಬರುತ್ತದೆ. ಅಂದು ಹೆಚ್ಚಾಗಿ ವಿಶಾಖ ನಕ್ಷತ್ರವಿರುತ್ತದೆ ನಿತ್ಯ ಚಂದ್ರನು ತುಲಾ ವೃಶ್ಚಿಕ ರಾಶಿಯಲ್ಲಿರುತ್ತಾನೆ.

೧೦) ಕಡಲೆಗಡುಬಿನ ಹುಣ್ಣಿವೆ:— ಆಷಾಢ ಶುದ್ಧ ಪೌರ್ಣಿಮೆಯ

ದಿನ ಈ ಹಬ್ಬವು ಬರುತ್ತದೆ. ಅಂದು ಮೂಲಾ ಇಲ್ಲವೆ ಪೂರ್ವಾಷಾಢ ನಕ್ಷತ್ರ ವಿರುತ್ತದೆ. ನಿತ್ಯ ಚಂದ್ರನು ಹೆಚ್ಚಾಗಿ ಧನು ರಾಶಿಯಲ್ಲಿರುತ್ತಾನೆ.

೧೧) ಭೀಮನ ಅಮಾವಾಸ್ಯೆ ಇಲ್ಲವೇ ದಿವಸೀ ಅಮಾವಾಸ್ಯೆ :— ಆಷಾಢ ವದ್ಯ ಅಮವಾಸ್ಯೆಗೆ ಈ ಹಬ್ಬವೆನ್ನುತ್ತಾರೆ. ಸಾಮಾನ್ಯವಾಗಿ ನಾಗರ ಅಮಾವಾಸ್ಯೆ ಎಂದು ಬಳಕೆಯಲ್ಲಿದೆ. ಪುಷ್ಯ, ಪುನರ್ವಸು ನಕ್ಷತ್ರ ಅಂದು ಇರುತ್ತದೆ. ನಿತ್ಯ ಚಂದ್ರನು ಹೆಚ್ಚಾಗಿ ಮಿಥುನ ಕರ್ಕರಾಶಿಯಲ್ಲಿರುತ್ತಾನೆ.

೧೨) ನಾಗಚವತಿ:— ಶ್ರಾವಣ ಶುದ್ಧ ಚವತಿಯ ದಿನ ಈ ಹಬ್ಬವು ಬರುತ್ತದೆ. ಅಂದು ಮಘಾ—ಇಲ್ಲವೆ-ಪೂರ್ವಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಹೆಚ್ಚಾಗಿ, ಸಿಂಹರಾಶಿಯಲ್ಲಿರುತ್ತಾನೆ.

೧೩) ನಾಗಪಂಚಮಿ:— ಶ್ರಾವಣ ಶುದ್ಧ ಪಂಚಮಿಯ ದಿನ ಈ ಹಬ್ಬವು ಬರುತ್ತದೆ. ಅಂದು ಉತ್ತರಾ ಇಲ್ಲವೆ ಹಸ್ತಾ ನಕ್ಷತ್ರ ಇರುತ್ತದೆ. ನಿತ್ಯ ಚಂದ್ರನು ಹೆಚ್ಚಾಗಿ ಕನ್ಯಾ ರಾಶಿಯಲ್ಲಿರುತ್ತಾನೆ.

೧೪) ಸಿರಿಯಾಳಷಷ್ಠಿ:— ಶ್ರಾವಣ ಶುದ್ಧ ಷಷ್ಠಿಯ ದಿನ ಈ ಹಬ್ಬವು ಬರುತ್ತದೆ ಈ ಸಿರಿಯಾಳ ಷಷ್ಠಿಗೆ ಹಳ್ಳಿಯಲ್ಲಿ ಕೆರೆಂಬಲೀ ಹಬ್ಬವೆಂದೂ ಪ್ರಚಾರದಲ್ಲಿದೆ. ಅಂದು ಹಸ್ತಾ ಇಲ್ಲವೇ ಚಿತ್ತಾ ನಕ್ಷತ್ರವಿರುತ್ತದೆ. ಚಂದ್ರನು ಹೆಚ್ಚಾಗಿ ಕನ್ಯಾ ಇಲ್ಲವೇ ತುಲಾ ರಾಶಿಯಲ್ಲಿರುತ್ತಾನೆ.

೧೫) ನೂಲಹುಣ್ಣಿವೆ:— ಶ್ರಾವಣ ಶುದ್ಧ ಪೌರ್ಣಿಮೆಯ ಈ ಹಬ್ಬ ಬರುತ್ತದೆ. ಈ ಹಬ್ಬಕ್ಕೆ ಶ್ರಾವಣೀ, ಜನಿವಾರಹಬ್ಬ, ರಕ್ಷಾಬಂಧನ, ನಾರೀಕೇಳಪೌರ್ಣಿಮಾ, ಎಂಬೀ ಮೊದಲಾದ ಪರ್ಯಾಯ ನಾಮಗಳಿಂದ ಹಬ್ಬವನ್ನಾಚರಿಸುತ್ತಾರೆ. ಅಂದು ಶ್ರವಣಾ ನಕ್ಷತ್ರವಿರುತ್ತದೆ. ಚಂದ್ರನು ಹೆಚ್ಚಾಗಿ ಮಕರ ರಾಶಿಯಲ್ಲಿರುತ್ತಾನೆ.

೧೬) ಕೃಷ್ಣ ಜಯಂತಿ:— ಶ್ರಾವಣ ಬಹುಳ ಅಷ್ಟಮಿಯ ದಿನ ಇರುವ ಗೋಕುಲಾಷ್ಟಮಿ ಹಬ್ಬಕ್ಕೆ ಕೃಷ್ಣಜಯಂತಿ ಎನ್ನುವರು. ಅಂದು ಹೆಚ್ಚಾಗಿ ರೋಹಿಣಿ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ವೃಷಭ ರಾಶಿಯಲ್ಲಿರುತ್ತಾನೆ.

೧೭) ವಿನಾಯಕ ಅಮಾವಾಸ್ಯೆ:— ಶ್ರಾವಣ ಬಹುಳ ಮೂವತ್ತನೆ ತಿಥಿಗೆ ಈ ಹಬ್ಬವು ಬರುತ್ತದೆ. ಅಂದು ಹೆಚ್ಚಾಗಿ ಆಶ್ಲೇಷ, ಮಘಾ ನಕ್ಷತ್ರವಿರುತ್ತದೆ. ಚಂದ್ರನು ಕರ್ಕ, ಸಿಂಹ ರಾಶಿಯಲ್ಲಿ ಇರುತ್ತಾನೆ.

೧೮) ಹರಿತಾಲಿಕಾ:— ಭಾದ್ರಪದ ಶುದ್ಧ ತದಿಗೆಯ ದಿನ ಈ ಹಬ್ಬವು ಬರುತ್ತದೆ. ಅಂದು ಉತ್ತರಾ ಇಲ್ಲವೇ ಹಸ್ತಾ ನಕ್ಷತ್ರ ಇರುತ್ತದೆ. ಚಂದ್ರನು ಸಿಂಹ, ಕನ್ಯಾ ರಾಶಿಗಳಲ್ಲಿರುತ್ತಾನೆ.

೧೯) ಗಣಪತಿಯ ಹಬ್ಬ:— ಭಾದ್ರಪದ ಶುದ್ಧ ಚವತಿಗೆ ಬರುವ ಗಣೇಶ ಚತುರ್ಥಿಗೇ ಈ ಹಬ್ಬವೆನ್ನುತ್ತಾರೆ. ಅಂದು ಹಸ್ತಾ ಇಲ್ಲವೇ ಚಿತ್ತಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಹೆಚ್ಚಾಗಿ ಕನ್ಯಾ ಇಲ್ಲವೇ ತುಲಾ ರಾಶಿಯಲ್ಲಿರುತ್ತಾನೆ.

೨೦) ಎಳೆ ಅಷ್ಟಮಿ:— ಭಾದ್ರಪದ ಶುದ್ಧ ಅಷ್ಟಮಿಗೆ ಈ ಹಬ್ಬ ಬರುತ್ತದೆ. ಅಂದು ಜೇಷ್ಠಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ವೃಶ್ಚಿಕ ರಾಶಿಯಲ್ಲಿರುತ್ತಾನೆ.

೨೧) ಜೋಕುಮಾರನ ಹಬ್ಬ:— ಭಾದ್ರಪದ ಶುದ್ಧ ಅಷ್ಟಮಿಯ ದಿನ ಜೋಕುಮಾರನ ಜಯಂತಿಯೂ ಮುಂದೆ ಪೌರ್ಣಿಮಾಕ್ಕೆ ಪುಣ್ಯತಿಥಿಯೂ ಇರುತ್ತದೆ. ಇದಕ್ಕೇನೇ ಜೋಕುಮಾರನ ಹುಣ್ಣಿವೆ ಎಂದು ಅನ್ನುವರು.

೨೨) ಅನಂತ ಚತುರ್ದಶಿ:— ಭಾದ್ರಪದ ಶುದ್ಧ ಚತುರ್ಥಿಗೆ ಈ ಹಬ್ಬವು ಬರುತ್ತದೆ. ಅಂದು ಧನಿಷ್ಠಾ, ಶತತಾರಕಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಮಕರ ಇಲ್ಲವೆ ಕುಂಭ ರಾಶಿಯಲ್ಲಿ ಇರುತ್ತಾನೆ.

೨೩) ಅವಿಧವಾ ನವಮಿ:— ಭಾದ್ರಪದ ವದ್ಯ ಅಷ್ಟಮೀ ತಿಥಿಗೆ ಅವಿಧವಾ ನವಮಿ ಎನ್ನುವರು. ಅಂದು ಮೃಗಶಿರಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ವೃಷಭ ಇಲ್ಲವೇ ಮಿಥುನ ರಾಶಿಯಲ್ಲಿ ಇರುತ್ತಾನೆ.

೨೪) ಸರ್ವಪಿತೃ ಅಮವಾಸ್ಯೆ ಇಲ್ಲವೆ ಮಹಾಲಯ:— ಭಾದ್ರಪದ ವದ್ಯ ಅಮಾವಾಸ್ಯೆಗೆಯೇ ಈ ಸರ್ವಪಿತೃ ಅಮಾವಾಸ್ಯೆಯೆನ್ನುತ್ತಾರೆ. ಅಂದು ಪೂರ್ವಾ, ಇಲ್ಲವೆ ಉತ್ತರಾ ನಕ್ಷತ್ರ ಇರುತ್ತದೆ. ಚಂದ್ರನು ಸಿಂಹ ಇಲ್ಲವೆ ಕನ್ಯಾ ರಾಶಿಯಲ್ಲಿ ಇರುತ್ತಾನೆ.

೨೫) ಘಟಸ್ಥಾಪನಾ:— ಆಶ್ವಿನ ಶುದ್ಧ ಪಾಡ್ಯಯ ದಿನ ಈ ಹಬ್ಬವು ಬರುವದು. ಅಂದು ಉತ್ತರಾ ಇಲ್ಲವೆ ಹಸ್ತಾ ನಕ್ಷತ್ರವಿದ್ದು ನಿತ್ಯಚಂದ್ರನು ಸಿಂಹ ಇಲ್ಲವೆ ಕನ್ಯಾ ರಾಶಿಯಲ್ಲಿರುತ್ತಾನೆ.

೨೬) ಲಲಿತ ಪಂಚಮಿ:— ಆಶ್ವಿನ ಶುದ್ಧ ಪಂಚಮಿಯ ದಿನ ಈ ಹಬ್ಬವು ಬರುತ್ತದೆ. ಅಂದು ಅನುರಾಧಾ ನಕ್ಷತ್ರವೂ ವೃಶ್ಚಿಕ ರಾಶಿಯೂ ಇರುತ್ತದೆ.

೨೭) ಖಂಡೇನವಮಿ:— ಆಶ್ವಿನ ಶುದ್ಧ ನವಮಿಗೆ ಈ ಹಬ್ಬವಿರುತ್ತದೆ. ಅಂದು ಪೂರ್ವಾಷಾಢ ಇಲ್ಲವೇ ಉತ್ತರಾಷಾಢ ನಕ್ಷತ್ರವಿರುತ್ತದೆ. ನಿತ್ಯಚಂದ್ರನು ಧನು, ಇಲ್ಲವೆ ಮಕರ ರಾಶಿಯಲ್ಲಿರುತ್ತಾನೆ.

೨೮) ವಿಜಯದಶಮಿ:— ಆಶ್ವಿನ ಶುದ್ಧ ದಶಮಿ ತಿಥಿಗೆ ಈ ಹಬ್ಬ ಬರುತ್ತದೆ. ಈ ಹಬ್ಬಕ್ಕೆ ಬನ್ನಿಹಬ್ಬ, ದಸರಾ ಎಂದೂ ಕರೆಯುವ ಪರಿಪಾಠವಿದೆ. ಅಂದು ಹೆಚ್ಚಾಗಿ ಶ್ರವಣ ನಕ್ಷತ್ರವೂ ಮಕರ ರಾಶಿಯೂ ಇರುತ್ತದೆ.

೨೯) ಸೀಗೆಹುಣ್ಣಿವೆ:— ಆಶ್ವಿನ ಶದ್ಧ ಪೌರ್ಣಿಮಾಕ್ಕೆ ಈ ಹಬ್ಬ ಬರುತ್ತದೆ. ಈ ಹಬ್ಬಕ್ಕೆ ಕೋಜಾಗರಿ ಮತ್ತು ಹೆಡ್ಡುಗ್ಗಿ ಹುಣ್ಣಿವೆ ಎಂದೂ ಕರೆಯುವ ಪರಿಪಾಠವಿದೆ. ಅಂದು ಹೆಚ್ಚಾಗಿ ಉತ್ತರಾಭಾದ್ರಪದ ಇಲ್ಲವೆ ರೇವತೀ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಮೀನ ರಾಶಿಯಲ್ಲಿರುತ್ತಾನೆ.

೩೦) ನೀರುತುಂಬುವ ಹಬ್ಬ:—ಆಶ್ವಿನ ವದ್ಯ (ಕೃಷ್ಣ) ತ್ರಯೋದಶಿ ದಿವಸ ಈ ಹಬ್ಬ ಬರುತ್ತದೆ. ಅಂದು ಉತ್ತರಾ ಇಲ್ಲವೆ ಹಸ್ತಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಸಿಂಹ ಇಲ್ಲವೆ ಕನ್ಯಾ ರಾಶಿಯಲ್ಲಿರುತ್ತಾನೆ.

೩೧) ನರಕಚತುರ್ದಶಿ— ಆಶ್ವಿನ ವದ್ಯ ಚತುರ್ದಶಿಯ ದಿನ ಈ ಹಬ್ಬವು ಬರುತ್ತದೆ. ಅಂದು ಹಸ್ತಾ ಚಿತ್ತಾ ನಕ್ಷತ್ರವಿರುತ್ತದೆ. ನಿತ್ಯ ಚಂದ್ರನು ಕನ್ಯಾ ಇಲ್ಲವೆ ತುಳಾ ರಾಶಿಯಲ್ಲಿರುತ್ತಾನೆ.

೩೨) ದೀಪಾವಳಿ ಅಮಾವಾಸ್ಯೆ ಇಲ್ಲವೆ ಲಕ್ಷ್ಮೀಪೂಜಾ:— ಆಶ್ವಿನ ವದ್ಯ ಅಮಾವಾಸ್ಯೆಯ ದಿನ ಈ ಹಬ್ಬ ಬರುತ್ತದೆ. ಅಂದು ಚಿತ್ತಾ, ಸ್ವಾತೀ ನಕ್ಷತ್ರವೂ ತುಳಾ ರಾಶಿಯೂ ಇರುತ್ತದೆ.

೩೩) ದೀಪಾವಳಿ ಪಾಡ್ಯ:— ಕಾರ್ತಿಕ ಶುದ್ಧ ಪ್ರತಿಪದೆಗೆ ಈ ಹಬ್ಬ ಬರುತ್ತದೆ. ಈ ಹಬ್ಬಕ್ಕೆ ಬಲಿಪ್ರತಿಪದಾ ಎಂದೂ ಕರೆಯುವ ಪರಿಪಾಠವಿದೆ. ಅಂದು ಸ್ವಾತಿ ಇಲ್ಲವೆ ವಿಶಾಖಾ ನಕ್ಷತ್ರವೂ ಇರುತ್ತದೆ. ನಿತ್ಯ ಚಂದ್ರ ತುಲಾ ಇಲ್ಲವೆ ವೃಶ್ಚಿಕ ರಾಶಿಯಲ್ಲಿರುವನು.

೩೪) ತುಲಸೀವಿವಾಹ:— ಕಾರ್ತಿಕ ಶುದ್ಧ ದ್ವಾದಶಿಗೆ ಈ ಹಬ್ಬವು ಬರುತ್ತದೆ. ಅಂದು ರೇವತೀ ನಕ್ಷತ್ರವೂ ಮೀನ ರಾಶಿಯೂ ಇರುತ್ತದೆ.

೩೫) ವೈಕುಂಠ ಚತುರ್ದಶಿ.— ಕಾರ್ತಿಕ ಶುದ್ಧ ಚತುರ್ದಶಿಯ ದಿನ ಈ ಹಬ್ಬವು ಬರುತ್ತದೆ. ಅಂದು ಅಶ್ವಿನೀ ನಕ್ಷತ್ರವೂ ಮೇಷ ರಾಶಿಯೂ ಇರುತ್ತದೆ.

೩೬) ಗೌರೀಹುಣ್ಣಿವೆ:— ಕಾರ್ತಿಕ ಶುದ್ಧ ಪೌರ್ಣಿಮೆಯ ದಿನ ಈ ಹಬ್ಬವು ಬರುತ್ತದೆ. ಈ ಹಬ್ಬಕ್ಕೆಯೇ ತ್ರಿಪುರೀ ಪೌರ್ಣಿಮಾ ಎನ್ನುವರು. ಅಂದು ಭರಣಿ ನಿತ್ಯ ನಕ್ಷತ್ರವೂ ಮೇಷ ರಾಶಿಯಲ್ಲಿ ನಿತ್ಯ ಚಂದ್ರನು ನಿರುತ್ತಾನೆ.

೩೭) ಛಟ್ಟೀ ಅಮಾವಾಸ್ಯೆ:— ಕಾರ್ತಿಕ ವದ್ಯ ಅಮಾವಾಸ್ಯೆಗೆ ಈ ಹಬ್ಬ ಬರುತ್ತದೆ. ಅಂದು ವಿಶಾಖಾ ನಕ್ಷತ್ರವೂ ತುಲಾ ವೃಶ್ಚಿಕ ರಾಶಿಯೂ ಇರುತ್ತದೆ.

೩೮) ಚಂಪಾಷಷ್ಠಿ:— ಮಾರ್ಗಶಿರ್ಷ ಶುದ್ಧ ಷಷ್ಠಿ ದಿನ ದಿನ ಈ ಹಬ್ಬ ಬರುತ್ತದೆ. ಅಂದು ಹೆಚ್ಚಾಗಿ ಶ್ರವಣಾ ನಕ್ಷತ್ರವೂ ಮಕರ ರಾಶಿಯೂ ಇರುತ್ತದೆ. ಅಂದೇ ಸುಬ್ರಾಯನ ಷಷ್ಠಿಯೂ ಇರುತ್ತದೆ.

೩೯) ಗೀತಾಜಯಂತಿ:— ಮಾರ್ಗಶಿರ್ಷ ಶುದ್ಧ ಏಕಾದಶಿಯ ದಿನ ಈ ಹಬ್ಬವನ್ನು ಆಚರಿಸುತ್ತಾರೆ. ಅಂದು ಹೆಚ್ಚಾಗಿ ರೇವತೀ ನಕ್ಷತ್ರವೂ ಹಾಗೂ ಮೀನ ರಾಶಿಯೂ ಇರುತ್ತದೆ.

೪೦) ಹೊಸ್ತಲಹುಣ್ಣಿವೆ ಇಲ್ಲವೆ ದತ್ತ ಜಯಂತಿ:— ಮಾರ್ಗಶಿರ್ಷ ಶುದ್ಧ ಪೌರ್ಣಿಮಾ ದಿನ ಈ ಹಬ್ಬವು ಬರುತ್ತದೆ. ಅಂದು ರೋಹಿಣಿ ಇಲ್ಲವೆ ಮೃಗಶಿರಾ ನಕ್ಷತ್ರ ಇರುತ್ತದೆ. ನಿತ್ಯ ಚಂದ್ರನು ವೃಷಭ ಇಲ್ಲವೆ ಮಿಥುನ ರಾಶಿಯಲ್ಲಿರುತ್ತಾನೆ.

೪೧) ಎಳ್ಳಅಮಾವಾಸ್ಯೆ:— ಮಾರ್ಗಶಿರ್ಷ ಕೃಷ್ಣ ಅಮಾವಾಸ್ಯೆಗೆ

ಈ ಹಬ್ಬ ಬರುತ್ತದೆ. ಅಂದು ಜೇಷ್ಠಾ ಇಲ್ಲವೆ ಮೂಲಾನಕ್ಷತ್ರ ಇರುತ್ತದೆ. ನಿತ್ಯಚಂದ್ರನು ವೃಶ್ಚಿಕ ಇಲ್ಲವೆ ಧನು ರಾಶಿಯಲ್ಲಿರುತ್ತಾನೆ.

೪೨) ಮಕರ ಸಂಕ್ರಮಣ:— ಈ ಹಬ್ಬವು ತಿಥಿ ನಕ್ಷತ್ರಗಳಿಗಿಂತ ಇಂಗ್ರೇಜೀ ತಾರೀಖು ಜನೇವರಿ ೧೪ರಂದು ಬರುತ್ತದೆ.

೪೩) ಬನದಹುಣ್ಣಿವೆ:— ಈ ಹಬ್ಬವು ಪೌಷ್ಯ ಶುದ್ಧ ಪೌರ್ಣಿಮೆಯ ದಿನ ಬರುತ್ತದೆ. ಅಂದು ಹೆಚ್ಚಾಗಿ ಪುನರ್ವಸು ನಕ್ಷತ್ರವಿರುತ್ತದೆ ನಿತ್ಯ ಚಂದ್ರ ಮಿಥುನ ಇಲ್ಲವೆ ಕರ್ಕ ರಾಶಿಯಲ್ಲಿರುತ್ತಾನೆ.

೪೪) ಅವರಾತ್ರಿ ಅಮಾವಸ್ಯೆ:— ಈ ಹಬ್ಬವು ಪೌಷ್ಯ ಬಹುಳ ಅಮಾವಾಸ್ಯೆಯ ದಿನ ಬರುತ್ತದೆ. ಅಂದು ಉತ್ತರಾಷಾಢಾ-ಶ್ರವಣಾ ನಕ್ಷತ್ರವೂ ಧನು ಇಲ್ಲವೆ ಮಕರ ರಾಶಿಯು ಇರುತ್ತದೆ.

೪೫) ವಸಂತ ಪಂಚಮಿ:— ಈ ಹಬ್ಬವು ಮಾಘ ಶುದ್ಧ ಪಂಚಮಿಯ ದಿನ ಬರುತ್ತದೆ. ಅಂದು ಉತ್ತರಾ-ಭಾದ್ರಪದ ನಕ್ಷತ್ರವೂ ಮೀನ ರಾಶಿಯೂ ಇರುತ್ತದೆ.

೪೬) ರಥಸಪ್ತಮಿ:— ಈ ಹಬ್ಬವು ಮಾಘ ಶುದ್ಧ ಸಪ್ತಮಿಯ ದಿನ ಬರುತ್ತದೆ. ಅಂದು ಅಶ್ವಿನೀ ಇಲ್ಲವೆ ಭರಣಿ ನಕ್ಷತ್ರವಿರುತ್ತದೆ ನಿತ್ಯ ಚಂದ್ರನು ಮೇಷ ರಾಶಿಯಲ್ಲಿ ಇರುತ್ತಾನೆ.

೪೭) ಭಾರತ ಹುಣ್ಣಿವೆ:— ಈ ಹಬ್ಬವು ಮಾಘ ಶುದ್ಧ ಪೌರ್ಣಿಮೆಯ ದಿನ ಬರುತ್ತದೆ. ಅಂದು ಹೆಚ್ಚಾಗಿ ಪುಷ್ಯಾ ನಕ್ಷತ್ರವೂ ನಿತ್ಯಚಂದ್ರನು ಕರ್ಕ ರಾಶಿಯಲ್ಲಿರುತ್ತಾನೆ.

೪೮) ಮಹಾಶಿವರಾತ್ರಿ:— ಈ ಹಬ್ಬವು ಮಾಘ ವದ್ಯ ಚತುರ್ದಶಿಯ ದಿನ ಬರುತ್ತದೆ. ಅಂದು ಹೆಚ್ಚಾಗಿ ಶ್ರವಣಾ ಇಲ್ಲವೆ ಧನಿಷ್ಠಾ ನಕ್ಷತ್ರವೂ ಇದ್ದು, ನಿತ್ಯಚಂದ್ರನು ಮಕರ ಇಲ್ಲವೆ ಕುಂಭ ರಾಶಿಯಲ್ಲಿ ಇರುತ್ತಾನೆ.

೪೯) ಹೋಳಿಹುಣ್ಣಿವೆ:— ಫಾಲ್ಗುಣ ಶುದ್ಧ ಪೌರ್ಣಿಮೆಗೆ ಈ ಹಬ್ಬ ಬರುತ್ತದೆ. ಅಂದು ಪೂರ್ವಾ ನಕ್ಷತ್ರವೂ ಸಿಂಹ ರಾಶಿಯೂ ಇರುತ್ತದೆ.

೫೦) ಯುಗಾದಿ ಅಮವಾಸ್ಯೆ:— ಫಾಲ್ಗುಣ ವದ್ಯ ಅಮಾವಾಸ್ಯೆಯ ದಿನ ಈ ಹಬ್ಬ ಬರುತ್ತದೆ. ಅಂದು ಪೂರ್ವಾಭಾದ್ರಪದ ಇಲ್ಲವೆ ಉತ್ತರಾ ಭಾದ್ರಪದ ನಕ್ಷತ್ರ ಇದ್ದು ನಿತ್ಯಚಂದ್ರನು ಕುಂಭ ಇಲ್ಲವೆ ಮೀನ ರಾಶಿಯಲ್ಲಿರುತ್ತಾನೆ.

ಸಾಧು ಸತ್ಪುರುಷರ ಜಯಂತಿ ಹಾಗೂ ಪುಣ್ಯ ತಿಥಿಗಳೂ ಕೂಡ ನಿರ್ಧಿಷ್ಟವಾದ ಮಾಸ ತಿಥಿಗಳಲ್ಲಿಯೇ ಬರುತ್ತವೆ.

೧) ಮಹಾವೀರ ಜಯಂತಿ:— ಚೈತ್ರ ಶುದ್ಧ ತ್ರಯೋದಶಿಯ ದಿನ ಜೈನರ ಮಹಾವೀರ ವರ್ಧಮಾನ ಜಯಂತಿ ಇರುತ್ತದೆ.

೨) ಬಸವೇಶ್ವರ ಜಯಂತಿ:— ವೈಶಾಖ ಶುದ್ಧ ತೃತಿಯಾ ದಿನ ಇರುತ್ತದೆ.

೩) ಶಿವಾಜಿ ಜಯಂತಿ:— ವೈಶಾಖ ಶುದ್ಧ ದ್ವಿತಿಯಾ ದಿನದಂದು ಇರುತ್ತದೆ.

೪) ಪರಶುರಾಮ ಜಯಂತಿ:— ವೈಶಾಖ ಶುದ್ಧ ತೃತಿಯಾದಂದು ಇರುತ್ತದೆ.

೫) ಗುರುನಾನಕ ಜಯಂತಿ :— ವೈಶಾಖ ಶುದ್ಧ ತೃತಿಯಾದಂದು ಇರುತ್ತದೆ.

೬) ಶಂಕರಾಚಾರ್ಯ ಜಯಂತಿ:— ವೈಶಾಖ ಶುದ್ಧ ಪಂಚಮಿ ಯಂದು ಇರುತ್ತದೆ.

೭) ರಾಮಾನುಜಾಚಾರ್ಯ ಪುಣ್ಯತಿಥಿ:— ವೈಶಾಖ ಶುದ್ಧ ಷಷ್ಠಿ ಯಂದು ಇರುತ್ತದೆ.

೮) ನರಸಿಂಹ ಜಯಂತಿ :— ವೈಶಾಖ ಶುದ್ಧ ಚತುರ್ದಶಿಯಂದು ಇರುತ್ತದೆ.

೯) ಕಬೀರ ಜಯಂತಿ :— ಜೇಷ್ಠ ಶುದ್ಧ ಪೌರ್ಣಿಮಾದಂದು ಇರು ತ್ತದೆ.

೧೦) ಸ್ವಾಮಿ ವಿವೇಕಾನಂದ ಪುಣ್ಯತಿಥಿ:— ಜೇಷ್ಠ ವದ್ಯ ಷಷ್ಠಿ ಯಂದು ಇರುತ್ತದೆ.

೧೧) ಭಗವಾನ್ ಬುದ್ಧ ಜಯಂತಿ:— ಅಶ್ವಿನಿ ಶುದ್ಧ ದಶಮಿ ಯಂದು ಇರುತ್ತದೆ.

೧೨) ಶ್ರೀಮಧ್ವ ಜಯಂತಿ :— ಅಶ್ವಿನಿ ಶುದ್ಧ ನವಮಿಯಂದು ಇರುತ್ತದೆ.

೧೩) ಸ್ವಾಮಿ ವಿವೇಕಾನಂದ ಜಯಂತಿ:- ಪೌಷ್ಯ ವೃದ್ಧ ಸಪ್ತಮಿಯಂದು ಇರುತ್ತದೆ.

೧೪) ಪುರಂದರದಾಸರ ಪುಣ್ಯದಿನ:- ಪೌಷ್ಯ ಬಹುಳ ಅಮಾವಾಸ್ಯೆಯಂದು

೧೫) ರಾಮಕೃಷ್ಣ ಪರಮಹಂಸರ ಜಯಂತಿ:- ಫಾಲ್ಗುಣ ಶುದ್ಧ ದ್ವಿತಿಯಾದಂದು.

## ಜಾತ್ರೆಗಳು

ನಮ್ಮ ಹಿಂದು ಜನರ ಜಾತ್ರೆ ರಥೋತ್ಸವಗಳೂ ಸಹ ನಿರ್ಧಿಷ್ಟವಾದ ಮಾಸ, ತಿಥಿ, ನಕ್ಷತ್ರಗಳಲ್ಲಿಯೇ ಬರುತ್ತವೆ. ಅವುಗಳ ವಿವರಗಳನ್ನು ಈ ಕೆಳಗಿನಂತೆ ಕೊಡಲಾಗಿದೆ—

೧) ಮುತ್ತೈದೆ ಹುಣ್ಣಿವೆ ಜಾತ್ರೆ:- ರಾಮಶೃಂಗಗಿರಿ ಅರ್ಥಾತ್ ಸೌದತ್ತಿ ಎಲ್ಲಮ್ಮ (ರೇಣುಕಾ) ದೇವಿಯ ಮುತ್ತೈದೆ ಹುಣ್ಣಿವೆಯ ಜಾತ್ರೆಯು ಚೈತ್ರ ಶುದ್ಧ ಪೌರ್ಣಿಮೆಯ ದಿನ ಆಗುತ್ತದೆ. ಕರಗದ ಜಾತ್ರೆ, ಚೈತ್ರ ಶುದ್ಧ ದ್ವಾದಶಿ ನಂಜನಗೂಡಿನಲ್ಲಿ ತೇರು.

೨) ರಂಡೆಹುಣ್ಣಿವೆ ಜಾತ್ರೆ:- ಮೇಲಿನ ಎಲ್ಲಮ್ಮಾ ದೇವಿಯ ರಂಡೆ ಹುಣ್ಣಿವೆಯ ಜಾತ್ರೆಯು ಮಾರ್ಗಶಿರ್ಷ ಶುದ್ಧ ಹುಣ್ಣಿವೆಯ ದಿನ ಜರಗುತ್ತದೆ.

೩) ಬನಶಂಕರೀ ಜಾತ್ರೆ:- ಬಾದಾಮಿಯ ಬನಶಂಕರಿ ದೇವಿಯ ಜಾತ್ರೆಯು ವೈಶಾಖ ವದ್ಯ ಅಮಾವಾಸ್ಯೆಯ ದಿನ ಜರಗುತ್ತದೆ. ವೈಶಾಖ ಶುದ್ಧ ಚತುರ್ದಶಿ ಬಿಳಿಗಿರಿ ರಂಗಸ್ವಾಮಿಯ ತೇರು.

೪) ಬ್ರಹ್ಮದೇವರ ಜಾತ್ರೆ:- ಧಾರವಾಡ ಜಿಲ್ಲೆಯ ಕರ್ಜಗಿಯ ಬ್ರಹ್ಮದೇವರ ಜಾತ್ರೆಯು ಕಾರ ಹುಣ್ಣಿಮೆಯಂದು ಜರಗುವದು.

೫) ಪಂಡರಪುರದ ವಿಠ್ಠಲದೇವರ ಜಾತ್ರೆ:- ಆಷಾಢ ಶುದ್ಧ ಏಕಾದಶಿಯ ದಿವಸ ಜರಗುವದು. ಅಂತೇ ಚಾಮುಂಡಿ ಬೆಟ್ಟದಲ್ಲಿ ತೇರು ಹಾಗೂ ಆಶ್ವಿನ ಬಹುಳ ಚತುರ್ದಶಿ ಮಾದೇಶ್ವರನ ಬೆಟ್ಟದ ಜಾತ್ರೆ.

೭) ದೇವರಗುಡ್ಡದ ಜಾತ್ರೆ :- ಧಾರವಾಡ ಜಿಲ್ಲೆಯ ದೇವರ ಗುಡ್ಡದರ ಮಲ್ಲಾರೀದೇವರ ಜಾತ್ರೆ ಹಾಗೂ ಕಾರ್ತಿಕವು ಭಾರತಹುಣ್ಣಿವೆಯ ದಿನ ಜರುಗುವದ.

೦ ಬನಶಂಕರೀ ಜಾತ್ರೆ :- ಬಾದಾಮಿ ಬನಶಂಕರಿ ದೇವಿಯ ಜಾತ್ರೆಯುಪೌಷ್ಯ ಶುದ್ಧ ಪೌರ್ಣಿಮೆಯು ದಿನ ಜರಗುವದು.

೭) ಮೈಲಾರ ಜಾತ್ರೆ :- ಬಳ್ಳಾರೀ ಜಿಲ್ಲೆಯ ಮೈಲಾರದೇವರ ಜಾತ್ರೆಯು ಭಾರತಹುಣ್ಣಿವೆಯ ದಿನ ಜರಗುವದು.

೮) ಉಳವೀ ಜಾತ್ರೆ :- ಉಳವಿ ಶಿವಶರಣ ಚನ್ನಬಸವಣ್ಣನವರ ಜಾತ್ರೆಯೂ ಸಹ ಭಾರತಹುಣ್ಣಿವೆಯ ದಿನವೇ ಆಗುವದು.

೯) ಕುರವತ್ತಿ ಹಾಗು ಗೋಕರ್ಣ ಜಾತ್ರೆ :- ಈ ಎರಡೂ ಜಾತೆಗಳು ಮಾಘಮಾಸದ ಮಹಾಶಿವರಾತ್ರಿಯಂದು ಜರಗುವವು.

೧೦) ಕಾರ್ತಿಕ ಶುದ್ಧ ಪೌರ್ಣಿಮಾ :- ನಂಜನಗೂಡಿನಲ್ಲಿ ಚಿಕ್ಕ ಜಾತ್ರೆಗೆ ಹಾಗೂ ಕಾರ್ತಿಕ ಬಹುಳ ಷಷ್ಠಿ ದಿನ ತಳಕಾಡು ವೈದೇಶ್ವರನ ಚಿಕ್ಕ ಜಾತ್ರೆ. ಹಾಗೂ ಕಾರ್ತಿಕ ಬಹುಳ ಅಮಾವಾಸ್ಯೆಯ ದಿನ ಪಂಚಲಿಂಗ ದರ್ಶನ (ಇದು ೧೦-೧೨ ವರ್ಷಕೊಮ್ಮೆ ಆಗುತ್ತದೆ.

೧೧) ಮಾಘ ಶುದ್ಧ ನವಮಿ :- ಅಂದು ಮುಂಡುಕುತೊರೆ ಜಾತ್ರೆ ಇರುತ್ತದೆ.

೧೨) ಫಾಲ್ಗುಣ ಶುದ್ಧ ಚತುರ್ದಶಿ :- ಇಂದು ಕಾಡೂರಮ್ಮನ ಜಾತ್ರೆ (ಕಮ್ಮರವಾಡಿ) ಇರುತ್ತದೆ. ಹಾಗೂ ಪೂರ್ಣಿಮೆಯ ದಿನ "ಟ" ನರಸೀಪುರದಲ್ಲಿ ಗುಂಜಾ ನರಸಿಂಹಸ್ವಾಮಿಯ ತೇರು ಇರುತ್ತದೆ.

ಇನ್ನು ಕೆಲ ಬೇಸಾಯಗಾರರು ತಮ್ಮ ಜನ್ಮ ದಿನವನ್ನು ಹೇಳುವಾಗ ಅವರ ಭಾಷೆಯಲ್ಲಿಯೇ ಹೇಳುತ್ತಾರೆ. ಅವು ಈ ಕೆಳಗಿನಂತಿವೆ :-

೧) ಜೋಳಾ ಬಿತ್ತಿದ್ದಿಲ್ಲ.

೨) ಹತ್ತಿ ಬಿತ್ತುವ ತಿಂಗಳಿತ್ತು.

೩) ಸೇಂಗಾ ಕೀಳುವ ಬಂದಿದ್ದವು.

೪) ಋಣ ಹಬ್ಬ ಆಗಿತ್ತು.
೫) ಹಪ್ತೆ ವಸೂಲಿ ನಡೆದಿತ್ತು.
೬) ಮಗೆವಾಳೆ ಹತ್ತಿತ್ತು.
೭) ಮಗಿವಾಳೆ ಹೋಗಿತ್ತು.

ಈ ಜನರು ಮೇಲಿನಂತೆ ಕೊಡುವ ವಿವರಗಳಿಂದ ನಿಶ್ಚಿತ ತಿಂಗಳು, ಮಾಸಗಳನ್ನು ಕಂಡು ಹಿಡಿಯಲು ಬರುತ್ತದೆ. ಇದನ್ನರಿಯಲು ಜೋತಿಷಿಗೆ ಭಿನ್ನ ಭಿನ್ನ ಧಾನ್ಯಗಳನ್ನು ಬಿತ್ತುವ, ಕೊಯ್ಯುವ ಮಿತಿಗಳ ಮಾಹಿತಿ ಹಾಗೂ ಭಿನ್ನ ಭಿನ್ನ ಮಳೆಗಳು ಪ್ರಾರಂಭವಾಗುವ ಕಾಲ ಗೊತ್ತಿದ್ದರೆ ಸಾಕು.

ಉದಾ :– ಜೂನ ತಿಂಗಳು ಏಳನೇ ತಾರೀಖಿಗೆ ವೃಗಶಿರಾ ಪ್ರವೇಶ ವಾಗುತ್ತಿರುವುದು ಎಲ್ಲರಿಗೂ ತಿಳಿದ ಮಾತು.

## ೨
## ಅಂದಾಜ ವೇಳೆಯನ್ನು ನಿರ್ಧರಿಸುವಿಕೆ

ಯಾರೊಬ್ಬ ವ್ಯಕ್ತಿಯು ಜನಿಸಿದ ಸರಿಯಾದ ವರ್ಷ (ಇಸ್ವಿ) ತಿಂಗಳು ಮತ್ತು ದಿನಾಂಕಗಳು ಉಪಲಬ್ಧವಾಗಿದ್ದರೂ ಕೂಡ, ನಾವು ಆ ವ್ಯಕ್ತಿಯ ಜಾತಕವನ್ನು ತಯಾರಿಸುವುದಾಗಲಿ, ಖಚಿತ ಪಡಿಸುವುದಾಗಲಿ ಅಥವಾ ನಿರ್ಧರಿಸುವದಾಗಲಿ ಸಾಧ್ಯವಾಗುವದಿಲ್ಲ. ಕಾರಣವಿಷ್ಟೇ, ಸರಿಯಾದ ಜನನ ವೇಳೆ ಉಪಲಬ್ಧವಾಗದಿರುವಿಕೆ. ಏಕೆಂದರೆ, ಒಂದು ದಿನದಲ್ಲಿ ೨೪ ಜಾತಕಗಳು ಬೀಳುತ್ತವೆ. ಹಾಗಾದರೆ ಹೇಗೆ ಜಾತಕವನ್ನು ನಿರ್ಧರಿಸಬೇಕು ಮತ್ತು ಜನಿಸಿದ ಅಂದಾಜು ವೇಳೆಯನ್ನು ಹೇಗೆ ಗೊತ್ತುಪಡಿಸಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ನಮಗೆ ಯಾವ ವ್ಯಕ್ತಿಯ ಜಾತಕವನ್ನು ತಯಾರಿಸಬೇಕಾಗಿದೆಯೋ ಆ ವ್ಯಕ್ತಿಯ ಅಂದಾಜು ಜನನ ಸಮಯವನ್ನು ಖಚಿತಪಡಿಸಲು ಸಂಬಂಧಿಸಿದ ವ್ಯಕ್ತಿಗಾಗಲಿ ಅವನ ಮಾತಾ ಪಿತೃ, ಬಂಧು–ಬಳಗ ಮತ್ತು ಹಿತರಕ್ಷಕ ಇವರಿಗಾಗಲಿ ಪ್ರಶ್ನೆಗಳನ್ನು ಮಾಡಿದಾಗ ಈ ಕೆಳಗಿನಂತೆ ಉತ್ತರ ದೊರೆಯ ಬಹುದು.

ಸಾಮಾನ್ಯವಾಗಿ, ಪುರ ಪಟ್ಟಣಗಲ್ಲಿ ವಾಸಿಸುವ ಸುಶಿಕ್ಷಿತ ಜನರು ಕೊಡುವ ಅಂದಾಜು ವೇಳೆಯು ವಿವರಣೆಯು ಈ ಕೆಳಗಿನಂತಿರುತ್ತದೆ.
ಪ್ರಾತಃಕಾಲ, ಬೆಳಗ್ಗೆ, ಮುಂಜಾನೆ, ಮಧ್ಯಾಹ್ನ, ಸಾಯಂಕಾಲ, ಮಧ್ಯರಾತ್ರಿ.

ಅವರು ಮೇಲಿನಂತೆ ವಿವರಿಸಿದ ಅಂದಾಜು ವೇಳೆಯು ಮೇಲಿಂದ ಸ್ಟ್ಯಾಂಡರ್ಡ್ ವೇಳೆಯನ್ನು ಈ ಕೆಳಗಿನಂತೆ ನಿರ್ಧರಿಸಬಹುದು.

| | | | |
|---|---|---|---|
| ಪ್ರಾತಃಕಾಲ | = | ಸ್ಟ್ಯಾ. ಟಾ. | ೪ ರಿಂದ — ೬ ರ ವರೆಗೆ |
| ಬೆಳಗ್ಗೆ | = | ,, | ೬ ರಿಂದ — ೮ ರ ವರೆಗೆ |
| ಮುಂಜಾನೆ | = | ,, | ೮ ರಿಂದ — ೧೨ ರ ವರೆಗೆ |
| ಮಧ್ಯಾಹ್ನ | = | ,, | ೧೨ ರಿಂದ — ೪ ರ ವರೆಗೆ |
| ಸಾಯಂಕಾಲ | = | ,, | ೪ ರಿಂದ — ೮ ರ ವರೆಗೆ |
| ರಾತ್ರಿ | = | ,, | ೮ ರಿಂದ — ೧೧ ರ ವರೆಗೆ |
| ಮಧ್ಯರಾತ್ರಿ | = | ,, | ೧೨ ರಿಂದ — ೪ ರ ವರೆಗೆ |

ಇನ್ನು, ಹಳ್ಳಿ ಗ್ರಾಮಗಳಲ್ಲಿ ವಾಸಿಸುವ ಅಥವಾ ಕಲಿಯದೇ ಇರುವ ಜನರು ಕೊಡುವ ಅಂದಾಜು ವೇಳೆಯ ವಿವರಣೆಯು ಈ ಕೆಳಗಿನಂತೆ ಇರುತ್ತದೆ.

೧) ನಸುಕು ಹರಿಯಾಕ ಒಂದು ತಾಸು ಕಮ್ಮಿ ಇತ್ತು.
೨) ಬೆಳಕು ಹರಿಯಾಕ ಎರಡು ಮೂರು ತಾಸು ಇತ್ತು.
೩) ಚುಮುಚುಮು ನಸುಕು ಇತ್ತು.
೪) ಸೂರ್ಯಾ ಒಂದೀಟು ಬಂದಿದ್ದಾ.
೫) ಒಂದು ತಾಸು ಹೊತ್ತು ಏರಿತ್ತು ಎರಡು ತಾಸು ಏರಿತ್ತು.
೬) ಸೂರ್ಯಾ ನೆತ್ತಿ ಮೇಲೆ ಬಂದಿದ್ದಾ.
೭) ಹೊತ್ತು ಮುಳುಗಾಕ ಒಂದು ತಾಸು ಕಡಿಮೆ ಇತ್ತು.
೮) ದೀಪ ಹಚ್ಚಿದ್ದಿಲ್ಲ.
೯) ಎರಡು ತಾಸು ರಾತ್ರಿ ಆಗಿತ್ತು.
೧೦) ಸರಿರಾತ್ರಿಯಾಗಿತ್ತು.

ಇಂಥ ಜನರು ಮೇಲಿನಂತೆ ಮಾತಾಡಿದಾಗ ಆ ಮಾತುಗಳಿಗೆ ಈ ಕೆಳಗಿನಂತೆ ಅರ್ಥಹಚ್ಚಬೇಕು.

೧) ನಸುಕು ಹರಿಯಾಕ ಒಂದು ತಾಸು ಕಮ್ಮಿ ಇತ್ತು. ಅಂದರೆ ಬೆಳಗಾಗುವ ಮೊದಲು ಒಂದು ತಾಸು.

೨) ಬೆಳಕು ಹರಿಯಲ್ಕಾಕ ಎರಡು ಮೂರು ತಾಸು ಇತ್ತು ಅಂದರೆ ಬೆಳಗಾಗಲು ಎರಡು ಮೂರು ತಾಸು ಮೊದಲು

೩) ಚುಮುಚುಮು ನಸುಕು ಇತ್ತು ಅಂದರೆ ಅರುಣೋದಯ ಸಮಯ.

೪) ಸೂರ್ಯಾ ಒಂದೀಟು ಬಂದಿದ್ದ ಅಂದರೆ ಸೂರ್ಯೋದಯದಿಂದ ಸುಮಾರು ಅರ್ಧ ತಾಸಿನ ಅವಧಿ.

೫) ಒಂದು ತಾಸು ಅಥವಾ ಎರಡು ತಾಸು ಹೊತ್ತು ಏರಿತ್ತು ಅಂದರೆ ಸೂರ್ಯೋದಯದಿಂದ ಒಂದು ತಾಸು ಇಲ್ಲವೆ ಎರಡು ತಾಸು.

೬) ಸೂರ್ಯ ನೆತ್ತಿಯ ಮೇಲೆ ಬಂದಿದ್ದ ಅಂದರೆ ಮಧ್ಯಾಹ್ನ. ೧೨ ಘಂಟೆ.

೭) ಹೊತ್ತು ಮುಳಗಾಕ ಒಂದು ತಾಸು ಕಡಿಮೆ ಇತ್ತು ಅಂದರೆ ಸೂರ್ಯಾಸ್ತವಾಗಲು ಒಂದು ತಾಸು ಕಡಿಮೆ.

೮) ದೀಪ ಹಚ್ಚಿದ್ದಿಲ್ಲ ಅಂದರೆ ಸೂರ್ಯಾಸ್ತವಾಗುವ ವೇಳೆಯಿಂದ ಅರ್ಧ ಘಂಟೆ ಒಳಗೆ.

೯) ಎರಡು ತಾಸು ರಾತ್ರಿ ಆಗಿತ್ತು ಅಂದರೆ ಸೂರ್ಯಾಸ್ತ ಆದ ಬಳಿಕ ಎರಡು ತಾಸು.

೧೦) ಸರಿ ರಾತ್ರಿ ಆಗಿತ್ತು ಅಂದರೆ ಮಧ್ಯರಾತ್ರಿ ಆಗಿತ್ತು.

೧೧) ಹೂಬಿಸಿಲು ಇತ್ತು ಅಂದರೆ ಸೂರ್ಯಾಸ್ತವಾಗುವ ಪೂರ್ವದಲ್ಲಿ ಅರ್ಧ ತಾಸು ಮೊದಲು ಎಂದು ತಿಳಿಯಬೇಕು.

ಸಾಮಾನ್ಯವಾಗಿ ಹಳ್ಳಿಯಲ್ಲಿ ಸೂರ್ಯೋದಯದಿಂದ ಒಂದೊಂದು ತಾಸಿಗೆ ಒಂದೊಂದು ಗಂಟೆಯೆಂದು ನಿರ್ಧರಿಸುವ ಪರಿಪಾಠವಿದೆ. ಅದನ್ನು ಈ ಕೆಳಗಿನಂತೆ ನೋಡಬಹುದು.

**ಮುಂಜಾನೆ :**

ಒಂದು ತಾಸು – ಸೂರ್ಯೋದಯದಿಂದ ಒಂದು ತಾಸು (ಸುಮಾರು ಏಳು ಗಂಟೆ)

ಎರಡು ತಾಸು – ಎಂಟು ಗಂಟೆ

ಮೂರು ತಾಸು – ಒಂಭತ್ತು ಗಂಟೆ

ನಾಲ್ಕು ತಾಸು – ಹತ್ತು ಗಂಟೆ

ಐದು ತಾಸು – ಹನ್ನೊಂದು ಗಂಟೆ

ಆರು ತಾಸು – ಹನ್ನೆರಡು ಗಂಟೆ

**ಮಧ್ಯಾಹ್ನ :**

ಏಳು ತಾಸು – ಒಂದು ಗಂಟೆ

ಎಂಟು ತಾಸು – ಎರಡು ಗಂಟೆ

ಒಂಬತ್ತು ತಾಸು – ಮೂರು ಗಂಟೆ

ಹತ್ತು ತಾಸು – ನಾಲ್ಕು ಗಂಟೆ

ಹನ್ನೊಂದು ತಾಸು – ಐದು ಗಂಟೆ

ಇದರಂತೆಯೇ ರಾತ್ರಿಯ ವೇಳೆಯ ತಾಸುಗಳ ಮೇಲಿಂದ ಸ್ಟ್ಯಾಂಡರ್ಡ ವೇಳೆಯನ್ನು ನಿರ್ಧರಿಸಬೇಕು.

ಮತ್ತೆ ಕೆಲ ಹಳ್ಳಿಯ ಜನರು ಜನ್ಮವೇಳೆಯನ್ನು ಕೊಡುವ ವಿವರಣೆಯನ್ನು ತಮ್ಮದೇ ಭಾಷೆಯಲ್ಲಿ ಕೊಡುತ್ತಾರೆ :–

" ಶಾಲೆ ಬಿಟ್ಟಿದ್ದಿಲ್ಲ, ದನಕರು ಬಿಟ್ಟಿದ್ದವು, ದನಕರು ಬಂದಿದ್ದವು " ಇವರ ಈ ಮಾತುಗಳಿಂದ ಅಂದಾಜು ವೇಳೆಯನ್ನು ನಿರ್ಧರಿಸಲು ಬರುತ್ತದೆ.

ಪುರ ಪಟ್ಟಣಗಳಿಂದ ವಾಸಿಸುವ ಗಿರಣಿ, ಕಾರಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಕೊಡುವ ಜನನ ವೇಳೆಯನ್ನು ತಮ್ಮದೇ ಮಾತಿನಲ್ಲಿ ಹೇಳುತ್ತಾರೆ. "ಭೋಂಗಾ ಆಗಿತ್ತು, ಎರಡನೇ ಭೋಂಗಾ ಆಗಿದ್ದಿಲ್ಲ, ಬಿಡುವ ಭೋಂಗಾದ ಬಳಿಕ" ಈ ಮೊದಲಾಗಿ ಹೇಳುವರು.

ಇನ್ನು ಕೆಲ ಜನರು ಸಿನಿಮಾದ ಆಟ ಬಿಟ್ಟಿದ್ದಿಲ್ಲ. ಎರಡನೇಯ ಆಟ ಪ್ರಾರಂಭವಾಗಿತ್ತು. ಈ ಮೊದಲಾಗಿ ಮಾತನಾಡುವ ಇವರ ಮಾತಿನಿಂದ ಅಂದಾಜು ವೇಳೆಯನ್ನು ನಿರ್ಧರಿಸಲು ಬರುತ್ತದೆ.

## ೩

## ರಾಶಿ ಹಾಗೂ ಲಗ್ನಗಳ ವಿಶಿಷ್ಟತೆ

ಜನನ ದಿನಾಂಕ, ವರುಷ, ತಿಂಗಳುಗಳನ್ನು ಹೇಗೆ ಖಚಿತಗೊಳಿಸಬೇಕೆಂಬುದನ್ನು ಪ್ರಥಮ ಪ್ರಕರಣದಲ್ಲಿ ವಿವೇಚಿಸಿ, ಎರಡನೇಯ ಪ್ರಕರಣದಲ್ಲಿ ಪೃಚ್ಛಕನ ಅಂದಾಜು ವೇಳೆಯ ನಿರ್ಣಯದ ಕ್ರಮವನ್ನು ಪರಿಶೀಲಿಸಿದೆವು. ಆದರೆ ಕೇವಲ ವಿವೇಚನೆ ಹಾಗೂ ಪರಿಶೀಲನೆಗಳ ಆಧಾರದ ಮೇಲೆ ಸರಿಯಾದ ಜಾತಕದ ನಿರ್ಧಾರ ಸಾಧ್ಯವಾಗುವದಿಲ್ಲ ಏಕೆಂದರೆ ಈ ಅಂದಾಜು ವೇಳೆಯಲ್ಲಿ ಅನೇಕ ಜಾತಕಗಳು ಭಿನ್ನ ಭಿನ್ನ ಲಗ್ನ, ರಾಶಿಗಳೂ ಉದ್ಭವಿಸುವದುಂಟು.

ವರ್ಷ, ತಿಂಗಳು, ದಿನಾಂಕಗಳನ್ನು ನಿರ್ಧಾರ ಮಾಡಿ ಅಂದಾಜು ವೇಳೆಯು ನಿರ್ಣಯವಾದಾಗ ಅನೇಕ ಜಾತಕಗಳು, ಸಂದಿಗ್ಧ ಜಾತಕಗಳೂ ಬರುವದುಂಟು. ಈ ಸಂದಿಗ್ಧ ಸನ್ನಿವೇಶದಲ್ಲಿ ಪೃಚ್ಛಕನ ಸರಿಯಾದ ಜಾತಕವನ್ನು ಖಚಿತ ಪಡಿಸಲು ನಿರ್ಧಿಷ್ಟ ಲಗ್ನ, ರಾಶಿಗಳ ವೈಶಿಷ್ಟ್ಯವನ್ನು ಅರಿಯುವದು ಅವಶ್ಯಕ.

ರಾಶಿಗಳ ಹಾಗೂ ಲಗ್ನಗಳ ವಿಶಿಷ್ಟತೆಯನ್ನು ಪೃಚ್ಛಕರ ದರ್ಶನ, ಸಂಭಾಷಣೆ ನಡತೆ, ನಡೆಯುವ ರೀತಿ, (walking style), ಮಲಗುವ ಬಗೆ (ನಿದ್ರಾ ಭಂಗಿ) ತಿನ್ನುವ ಪದಾರ್ಥಗಳ ರುಚಿ ಅರುಚಿ, ಜೀವನದಲ್ಲಿಯ ಮಹತ್ವದ ಘಟನೆಗಳು, ಮೊದಲಾದವುಗಳ ವೈವಿಧ್ಯತೆಗಳಿಂದ ನಿರ್ಧರಿಸಲಾಗುತ್ತದೆ. ಈ ರಾಶಿ, ಲಗ್ನಗಳ ವಿಶಿಷ್ಟತೆಯ ವರೆಗಿಲ್ಲಿಗೆ ಪೃಚ್ಛಕರ ಸಂದಿಗ್ಧ ಜಾತಕಗಳನ್ನು ಹಚ್ಚಿ ಸರಿಯಾದ ಜನ್ಮಪತ್ರಿಕೆಯನ್ನು ನಿರ್ಧರಿಸುವದನ್ನು ಈ ಪ್ರಕರಣದಲ್ಲಿ ನಿರ್ಧರಿಸಲಾಗಿದೆ.

### ವ್ಯಕ್ತಿಗಳ ನಡೆಯುವ ರೀತಿಗಳಿಂದ ರಾಶಿಗಳನ್ನು ತಿಳಿದುಕೊಳ್ಳುವಿಕೆ

ದೂರದಿಂದಲೇ, ಬರುತ್ತಿರುವ ಇಲ್ಲವೇ ಹೋಗುತ್ತಿರುವ ವ್ಯಕ್ತಿಗಳ ರಾಶಿಗಳನ್ನು ಅವರ ನಡೆಯುವ ರೀತಿ (walking style) ಯಿಂದ ಹೇಗೆ ಗುರುತಿಸಬೇಕೆಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ—

ಮೇಷ ರಾಶಿ— ಸಾಮಾನ್ಯವಾಗಿ ಮೇಷ ರಾಶಿಯ ಜನರು ನಡೆಯುವಾಗ ದಣಿದ ಹೆಜ್ಜೆ, ಬೇಸರದ ನಡಿಗೆ, ಚಿಂತಾತುರ ಜೋಲುಮೋರೆ, ಶೀಘ್ರ ಗಮನ ಕಂಡು ಬರುತ್ತದೆ.

ವೃಷಭ— ಈ ರಾಶಿಯ ಜನರು ನಡಿಗೆಯಲ್ಲಿ ಚಟ್ ಚಟ್ ಎಂಬ ಪ್ರಕಾರದ ಶಬ್ದವು, ಭಾರವಾದ ಹೆಜ್ಜೆ, ಮೈಕೈಯನ್ನು ಹೊರಳಾಡಿಸುತ್ತ, ಕೈಗಳನ್ನು ಉದ್ದವಾಗಿ ಬೀಸುತ್ತ ಅಸ್ತವ್ಯಸ್ತವಾದ ನಡಿಗೆಯ ಕ್ರಮವು ಕಂಡು ಬರುತ್ತದೆ.

ಮಿಥುನ— ಈ ರಾಶಿಯ ಜನರು ನಡೆಯುವಾಗ ಹುಬ್ಬುಗಳನ್ನು ಮೇಲೇರಿಸುತ್ತ, ವಿಚಾರ ಮಗ್ನರಾಗಿ, ತಲೆ ಕೆಳಗೆ ಮಾಡಿಕೊಂಡು ರಸ್ತೆಯ ಒಂದೇ ಮಗ್ಗುಲಿನಿಂದ ಹೋಗುವದನ್ನು ಕಾಣಬಹುದು.

ಕರ್ಕ— ಈ ರಾಶಿಯ ಜನರನ್ನು ಅವರ ನಡಿಗೆಯಿಂದ ಬೇಗ ಗುರುತಿಸಲು ಬರುತ್ತದೆ. ಆಚೆ ಈಚೆ ನೋಡುತ್ತ ಎಡ-ಬಲ ಕಡೆಗೆ ದೃಷ್ಟಿಸುತ್ತ ಹ್ಯಾಟಿಗಾಲು ಹಾಕುತ್ತ (ಎಡಗಾಲು ಎಡಗಡೆ — ಬಲಗಾಲು ಬಲಗಡೆಗೆ ಹಾಕುತ್ತ) ನಡೆಯುವದೇ ಇವರ ವೈಶಿಷ್ಟ್ಯ.

ಸಿಂಹ ಹಾಗೂ ಧನು— ಈ ರಾಶಿಯ ಜನರ ನಡಿಗೆಯ ವೈಶಿಷ್ಟ್ಯವೆಂದರೆ ಗಂಭೀರ ನಡಿಗೆ, ದಪ್ಪವಾದ ಹಾಗೂ ಭಾರವಾದ ಹೆಜ್ಜೆ, ಎದೆ ಮುಂದೆ ಮಾಡಿ (ಎದೆ ಸೆಟಿಸಿ) ನಡೆಯುವಿಕೆ ಇರುತ್ತದೆ.

ಕನ್ಯಾ— ಕನ್ಯಾ ರಾಶಿಯ ಜನರನ್ನು ಅವರು ನಡೆಯುವ ರೀತಿಯಿಂದ ಬೇಗ ಗುರುತಿಸಲು ಬರುತ್ತದೆ. ಆನೆಯಂತೆ ತಲೆ ಅಲ್ಲಾಡಿಸುತ್ತ, ಬೆನ್ನನ್ನು ಬಗ್ಗಿಸುತ್ತ ಮಾತನಾಡುತ್ತ ನಡೆಯುವದೇ ಇವರ ವೈಶಿಷ್ಟ್ಯ.

ತುಲಾ ಹಾಗೂ ಕುಂಭ— ಈ ರಾಶಿಯ ಜನರ ನಡಿಗೆಯಲ್ಲಿ ನಾಟ್ಯವಿರುತ್ತದೆ. ಮೋಹಕ ದೃಷ್ಟಿ ಇರುತ್ತದೆ. ಚಪಲವಾದ ನಡಿಗೆ, ಶೀಘ್ರಗಮನ ಓಟದ ನಡಿಗೆ, ಹಿಂಬದಿ ನೆಲಕ್ಕೆ ಹತ್ತದೇ ನಡೆಯುವ ರೀತಿಯಾಗಿರುತ್ತದೆ.

ವೃಶ್ಚಿಕ ಹಾಗೂ ಮಕರ— ಈ ರಾಶಿಯ ಜನರು ನಡೆಯುವಾಗ ಭಯಾನಕ ದೃಷ್ಟಿ, ಗಂಭೀರ ನಡಿಗೆ, ತಲೆ ಕೆದರಿಕೊಳ್ಳುತ್ತ ಗಹನ ವಿಚಾರ ಮಗ್ನರಾದಂತೆ ಇರುವ ಗುಣಗಳು ಕಂಡುಬರುತ್ತವೆ. ಇದಲ್ಲದೆ ಇವರು ದೂರ ದೃಷ್ಟಿ ಇಡುತ್ತ, ದಪ್ಪವಾದ ಹೆಜ್ಜೆ ಇಡುವರು.

ಮೀನ— ಈ ರಾಶಿಯ ಜನರನ್ನು ಕೇವಲ ನಡಿಗೆಯಿಂದಲೇ ಗುರುತಿಸಬಹುದು. ಪುನಃ, ಪುನಃ ಹಿಂದೆ ನೋಡುತ್ತ (ಸಿಂಹಾವಲೋಕನ ಮಾಡುತ್ತ) ಶೀಘ್ರಗಾಮಿಗಳಾದ ಇವರು ನಡೆಯುವರೋ ಓಡುವರೋ ಎಂಬುದೂ ತಿಳಿಯದಂತಿರುವ ನಡಿಗೆಯುಳ್ಳವರಿರುತ್ತಾರೆ.

### ಸಂಭಾಷಣೆಯಿಂದ ತಿಳಿಯುವ ಸಂಗತಿಗಳು

ಭಿನ್ನ ಭಿನ್ನ ರಾಶಿಯ ಜನರೊಂದಿಗೆ ಸಂಭಾಷಣೆ. ಇಲ್ಲವೆ ಪ್ರಶ್ನೆ ಮಾಡುವದರಿಂದ ವಿಶಿಷ್ಟವಾದ ಸ್ವಭಾವ ಗುಣಧರ್ಮಗಳನ್ನು ಕಂಡುಕೊಳ್ಳಲು ಬರುತ್ತದೆ. ಅವು ಈ ಕೆಳಗಿನಂತೆ ಇರುತ್ತವೆ:—

ವೃಷಭ ಹಾಗೂ ಕನ್ಯಾ ರಾಶಿ— ವೃಷಭ ಹಾಗೂ ಕನ್ಯಾ ರಾಶಿಯ ಜನರೊಂದಿಗೆ ಸಂಭಾಷಣೆ ಮಾಡಿದಲ್ಲಿ ತಿಳಿಯುವದೇನೆಂದರೆ ಅವರು ಅತಿಯಾಗಿ ಮಾತನಾಡುತ್ತಾರೆ. ಇನ್ನೊಬ್ಬರಿಗೆ ಅವಕಾಶ ಕೊಡದಷ್ಟು ತಾವೊಬ್ಬರೆ ಮಾತನಾಡುತ್ತಾರೆ— ( They will not allow others to talk )

ಅದರಲ್ಲಿಯೂ ವೃಷಭ ರಾಶಿಯ ಜನರ ಸಂಭಾಷಣೆಯಲ್ಲಿ ಆತ್ಮಸ್ತುತಿ, ಆತ್ಮಪೌರುಷ ಅಧಿಕವಿದ್ದರೆ ಕನ್ಯಾರಾಶಿಯ ಜನರಲ್ಲಿ ದೈನ್ಯತೆ, ಕನಿಕರತೆ ಅಧಿಕವಾಗಿರುತ್ತದೆ ಹಾಗೂ ತಿನ್ನುಣ್ಣುವ ವಿಷಯಗಳ ಚರ್ಚೆ ಅಧಿಕವಿರುತ್ತದೆ

ಮಿಥುನ ಹಾಗೂ ಕುಂಭ— ಮಿಥುನ ಹಾಗೂ ಕುಂಭ ರಾಶಿಯ ಜನರ ಸಂಭಾಷಣೆಯಲ್ಲಿ ಕಂಡುಬರುವ ಸಂಗತಿ ಎಂದರೆ— ಸಂಭಾಷಣೆಯಲ್ಲಿ ವ್ಯಕ್ತಿಯ ತಪ್ಪನ್ನೇ ಅರಿಸುವದಾಗಲೀ ಸುಧಾರಿಸುವದೇ ಆಗಲೀ ಇದ್ದು ಪಾಂಡಿತ್ಯ ಪ್ರದರ್ಶಿಸುವದರಲ್ಲಿ ನಿಪುಣರಿರುತ್ತಾರೆ ಅದರಲ್ಲಿಯೂ ಮಿಥುನ ರಾಶಿಯ ಜನರಲ್ಲಿ ಈ ಗುಣಗಳು ಅಧಿಕ ಇರುತ್ತವೆ.

ಮಿಥುನ ರಾಶಿಯ ಜನರು ಸಂಭಾಷಣೆಯಲ್ಲಿ ಹಾಸ್ಯ (J kes), ಚುಚ್ಚು ಮಾತು ([illegible]ts) ವ್ಯಂಗೋಕ್ತಿ ಮುಂತಾದ ಗುಣಗಳಿದ್ದರೆ— ಕುಂಭ ರಾಶಿಯ ಜನರಲ್ಲಿ ಈ ಗುಣಗಳೊಂದಿಗೆ ಕಾರ್ಯತತ್ಪರತೆ ಇರುತ್ತದೆ. ಮತ್ತು ಅಧಿಕಾರ ವಾಣಿ, ನವ್ಯವಿಷಯ, ಸಂಶೋಧನಾ ಹಾಗೂ ಚಿಕಿತ್ಸಕ ಬುದ್ಧಿ, ವಿಷಯ ಸಂಗ್ರಹಣ ಮೊದಲಾದ ಗುಣಗಳಿರುತ್ತವೆ.

**ಸಿಂಹ ಹಾಗೂ ಧನು**— ಸಿಂಹ ಹಾಗೂ ಧನು ರಾಶಿಯ ಜನರೊಂದಿಗೆ ಸಂಭಾಷಣೆ ಮಾಡಿದಾಗ ಅವರ ಸಂಭಾಷಣೆಯಲ್ಲಿ— ಅಧಿಕಾರವಾಣಿ, ದರ್ಪದ ಮಾತು, ನಿಷ್ಠೂರ ನುಡಿ, ನಿರ್ಣಯದ ಆದೇಶ, ಸ್ವತಂತ್ರ ವಿಚಾರ, ಕಠೋರ ವರ್ತನೆ ಇವುಗಳು ಕಂಡುಬರುತ್ತವೆ. ಅದರಲ್ಲಿಯೂ ಧನು ರಾಶಿಯ ಜನರಿಗಿಂತ ಸಿಂಹ ರಾಶಿಯ ಜನರಲ್ಲಿ ಈ ಗುಣಗಳು ಅಧಿಕವಾಗಿರುತ್ತವೆ.

**ಕರ್ಕ ಹಾಗೂ ಮೀನ**— ಕರ್ಕ ಹಾಗೂ ಮೀನ ರಾಶಿಯ ಜನರ ಸಂಭಾಷಣೆಯಲ್ಲಿ ಕಂಡುಬರುವ ವಿಷಯಗಳೆಂದರೆ. ಇವರು ಯಾವಾಗಲೂ ಅಸ್ಥಿರ ಸ್ವಭಾವ (Absent Minded) ದವರಿರುತ್ತಾರೆ ಯಾವದೊಂದು ವಿಷಯದ ಮೇಲೆ ಅವರ ಲಕ್ಷ್ಯ ಕೇಂದ್ರೀಕೃತವಿರುವದಿಲ್ಲ. ವಿಷಯಾಂತರ ಮೇಲಿಂದ ಮೇಲೆ ಮಾಡುವರು. ವಿಷಯದಲ್ಲಿಯೂ ತತ್ಪರತೆ, ತಲ್ಲೀನತೆ, ಮಗ್ನತೆ ಇರುವದಿಲ್ಲ ಹಾ! ಹಾ!! ಎಂದು ವಿಕ್ಷಿಪ್ತರಂತೆ ಯೋಚಿಸದೇ ಒಮ್ಮೆಲೇ ಉತ್ತರ ಕೊಡುವರು. ಸಂಭಾಷಣೆಯಲ್ಲಿಯೂ ಕೂಡ (continuty) ವಿಷಯ ಪೂರ್ಣತೆ ಇರುವದಿಲ್ಲ.

ಕರ್ಕ ರಾಶಿಯ ಜನರಲ್ಲಿ (Absent mirdedness) ಅಸ್ಥಿರ ಸ್ವಭಾವದ ಗುಣ ಅಧಿಕವಿದ್ದರೆ ಮೀನ ರಾಶಿಯವರಲ್ಲಿ ವಿಷಯಾಂತರ ವಿಷಯದ ಹಾಗೂ ಬಹು ವಿಷಯಗಳ ವಿಕಾಸಕ್ಕೆ ಸಂಭಾಷಣೆಯ ಗುಣಗಳು ಅಧಿಕ ಇರುತ್ತವೆ

**ವೃಶ್ಚಿಕ ಹಾಗೂ ಮಕರ**— ವೃಶ್ಚಿಕ ಹಾಗೂ ಮಕರ ರಾಶಿಯ ಜನರೊಂದಿಗೆ ಸಂಭಾಷಣೆ ಮಾಡುವಾಗ ಕಂಡು ಬರುವ ವಿಷಯಗಳೆಂದರೆ— ಇವರು ಚಾಣಾಕ್ಷರೂ ಗಹನ ಹಾಗೂ ಧೂರ್ತ ವಿಚಾರದ ವಿಷಯಗಳಲ್ಲಿ ಪಳಗಿದವರಿರುತ್ತಾರೆ. ಭಾವನೆ, ಕಲ್ಪನೆ, ಊಹೆ, ತರ್ಕ, ನಿಂದೆ, ಸ್ತುತಿ, ಹೊಗಳಿಕೆ, ತಾತ್ಸಾರ, ಭಯ, ಮತ್ಸರ ಈ ಯಾವದಕ್ಕೂ ಪರಿವೆ ಇಲ್ಲದೇ ತಮ್ಮ ಇಷ್ಟದಂತೆ ಕಾರ್ಯ ಮಾಡುವ ಪ್ರವೃತ್ತಿ ಉಳ್ಳವರಿರುತ್ತಾರೆ ಇವರು (Practical minded) ಇವರು ಸಂಶಯಖೋರರೂ ಗೂಢವಿಚಾರದವರೂ. ದಕ್ಷರೂ ಇದ್ದು, ಆತ್ಮಮತಲಬಿ: ಗುಣಗಳು ಇವರಲ್ಲಿ ವ್ಯಕ್ತವಾಗುತ್ತವೆ.

ಮೇಷ— ಈ ರಾಶಿಯ ಜನರ ಸಂಭಾಷಣೆಯೊಂದಿಗೆ ಕಂಡುಬರುವ ವಿಷಯಗಳೆಂದರೆ — ದುರ್ದೈವದ ವಿಷಯಗಳೇ ಹೆಚ್ಚಾಗಿ ಇರುತ್ತವೆ. ಮಾತಿನಲ್ಲಿಯೂ ಕೂಡ, ಸೊಗಸು, ಸಂತೋಷ ಇಲ್ಲವೇ ದುಃಖ ಕ್ರೌರ್ಯ ವರ್ತನೆಗಳ ವಾರ್ತೆಗಳ ವಿಷಯಗಳು ಇರುತ್ತವೆ.

ತುಲಾ— ತುಲಾ ರಾಶಿಯ ಜನರೊಂದಿಗೆ ಸಂಭಾಷಣೆ ಮಾಡುವಾಗ ಕಂಡು ಬರುವ ಮಹತ್ವದ ಸಂಗತಿಗಳೆಂದರೆ ಐಷಾರಾಮ, ನಾಟಕ, ಸಿನೇಮಾ ಮೊದಲಾದ ವಿಲಾಸೀ ವಿಷಯಗಳ ಚರ್ಚೆ, ಸ್ವಚ್ಛತೆ ಅಚ್ಚುಕಟ್ಟುತನ, ಶೃಂಗಾರ ಮೊದಲಾದವುಗಳ ವಿಷಯಗಳ ಸಂಭಾಷಣೆ ಇದ್ದು ಹಾಸ್ಯ ವಿನೋದ ಪ್ರವೃತ್ತಿ, ವಾಕ್ ಪಾಂಡಿತ್ಯ ಮೊದಲಾದ ಗುಣಗಳು ಕಂಡು ಬರುತ್ತವೆ.

ದೈಹಿಕ ವಿಷಯಗಳು

ಯಾವೊಬ್ಬ ವ್ಯಕ್ತಿಯ ಅಂಗ ರಚನೆಯ ವಿಷಯವಾಗಿ ಕಂಡುಕೊಳ್ಳಲು ಲಗ್ನ ಕುಂಡಲಿಯ (ಜಾತಕದ) ಆಧಾರದ ಮೇಲಿಂದ ತಿಳಿದುಕೊಳ್ಳಲು ಬರುತ್ತದೆ. ಒಮ್ಮೆ ಕುಂಡಲಿ ಸಿಗದೇ ಇದ್ದಾಗ್ಯೂ ಕೂಡ ಕೇವಲ ಜನ್ಮ ರಾಶಿಯಿಂದ ಸ್ಥೂಲವಾಗಿ ಅಂಗರಚನೆಯ ವಿಷಯವಾಗಿ ಈ ಕೆಳಗಿನಂತೆ ತಿಳಿದುಕೊಳ್ಳಬಹುದು.

ಮೇಷ—ಈ ರಾಶಿಯ ಜನರು ಸಾಮಾನ್ಯವಾಗಿ ಕುಳ್ಳರಿರುತ್ತಾರೆ ಕೃಷ್ಣವರ್ಣದವರಿರುತ್ತಾರೆ. ಬಡಕಲು ದೇಹ. ಗುಳಿಬಿದ್ದ ಕಣ್ಣು, ನಿಸ್ತೇಜ ಮುಖ.

ವೃಷಭ—ಈ ರಾಶಿಯ ಜನರು ಸ್ಥೂಲ ದೇಹದವರು, ಆಕರ್ಷಕ ಕಣ್ಣು, ತುಟಿ ದಪ್ಪ ಹಾಗೂ ಮುಂದೆ ಇದ್ದು ಎತ್ತರದವರೂ ಇರುತ್ತಾರೆ.

ಮಿಥುನ— ಈ ರಾಶಿಯ ಜನರು ಸೌಂದರ್ಯಯುಕ್ತ ಮುಖ, ಉದ್ದವಾದ ಮೂಗು, ಕೆಲವೊಬ್ಬರು ಗಿಣಿಯಂತೆ ಕೊಕ್ಕಿನ ಮೂಗುಳ್ಳವರು. ಗುಂಗುರು ಕೂದಲು, ಚಿಕ್ಕ ಹಣೆ, ಆಕರ್ಷಕ ಕಣ್ಣು, ತೆಳ್ಳಗಾಗಿ ಒಳಗೆ ಮುಚ್ಚಿಕೊಂಡ ತುಟಿ, ಹಲ್ಲುಗಳ ಪಂಕ್ತಿ ಸರಳ ಹಾಗೂ ಸಣ್ಣವಾಗಿರುತ್ತವೆ. ಬಡಕಾದ, ಮಾಟಾದ ದೇಹವುಳ್ಳವರಿರುತ್ತಾರೆ.

ಕರ್ಕ— ಈ ರಾಶಿಯ ಜನರು ಚೌಕಾದ ಮೋರೆ, ಸೌಂದರ್ಯಯುಕ್ತ ದೇಹ, ಮಧ್ಯಮ ಎತ್ತರ ಗೌರವರ್ಣ, ವಿಸ್ತಾರವಾದ ಎದೆ ಉಳ್ಳವರಿರುತ್ತಾರೆ.

ಸಿಂಹ— ಈ ರಾಶಿಯ ಜನರು. ಗಿಡ್ಡ ಆಕಾರ, ಸ್ಥೂಲ ದೇಹ, ವಿಶಾಲ ವದನ, ದುಂಡಾದ ಮುಖ, ಪಿಂಗಾಕ್ಷ ಹಾಗೂ ವಿಶಾಲಾಕ್ಷ, ಸ್ಥೂಲ ಹನು. ವಿಸ್ತಾರವಾದ ಹಣೆ ಉಳ್ಳವರಿರುತ್ತಾರೆ.

ಕನ್ಯಾ— ಉದ್ದವಾದ ತೋಳು ತೆಳ್ಳಗೆ ಮಧ್ಯಮ ಎತ್ತರ, ಸುಂದರವಾದ. ಮೃದುವಾದ ಶರೀರ ಉಳ್ಳವರೂ ಕಾಂತಿಯುಕ್ತವಾದ ಕಣ್ಣುಳ್ಳವರೂ ಗೌರವರ್ಣದವರೂ ಹೆಚ್ಚು ವಯಸ್ಸಾಗಿದ್ದರೂ ಚಿಕ್ಕ ವಯಸ್ಸಿನವರಂತೆ ಕಾಣುವಂತಹ ದೇಹವುಳ್ಳವರಿರುತ್ತಾರೆ.

ತುಲಾ – ಈ ರಾಶಿಯ ಜನರು ಸೌಂದರ್ಯದ ಮೂರ್ತಿಯಂತಿರುವರು, ಆಕರ್ಷಕ ಕಣ್ಣು, ಎತ್ತರ ದೇಹ, ಸಂಪಿಗೆ ಹೂವಿನಂತಿರುವ ಮೂಗು. ದಾಳಿಂಬರ ಬೀಜದಂತಿರು ಹಲ್ಲು. ಉದ್ದವಾದ ಮೂಗು, ಹರವಾದ ಹಣೆ, ಕಾಂತಿಯುಕ್ತರಾಗಿ ಆಕರ್ಷಕರಾಗಿರುತ್ತಾರೆ.

ವೃಶ್ಚಿಕ—ವೃಶ್ಚಿಕ ರಾಶಿಯ ಜನರನ್ನು ಬಹುಬೇಗ ಗುರುತಿಸಬಹುದು. ಇವರ ಗಲ್ಲಗಳು ಉಬ್ಬಿರುವವು (ತುಂಬಿದ ಗಲ್ಲಗಳು) ದಪ್ಪ ಹಾಗು ಗಿಡ್ಡ ಮೂಗು, ವಿಶಾಲವಾದ ನೇತ್ರಗಳು, ದೊಡ್ಡ ವೃಕ್ಷಸ್ಥಲ, ದುಂಡಾದ ತೊಡೆಗಳು ಹಾಗೂ ಮೊಣಕಾಲುಗಳು, ಸ್ಥೂಲದೇಹ. ಮುಂದೆ ಚಾಚಿದ ತುಟಿ, ಇಷ್ಟಾದರೂ ಸೌಂದರ್ಯ ಹಾಗೂ ಆಕರ್ಷಕರಾಗಿರುವದಿಲ್ಲ.

ಧನು— ಈ ರಾಶಿಯ ಜನರನ್ನಂತೂ ಗುರುತಿಸುವದು ಕಠಿಣ ಕಾರ್ಯವಲ್ಲ ದಷ್ಟಪುಷ್ಟ, ಸ್ಥೂಲವಾದ ದೇಹ. ಆಜಾನುಬಾಹು, ಭವ್ಯ ವ್ಯಕ್ತಿತ್ವ, ಮೇಧಾವೃದ್ಧಿಯ ಪ್ರಕೃತಿ, ಚಪ್ಪಟೆ ಮೂಗು, ದಪ್ಪವಾದ ಕುತ್ತಿಗೆ, ದಪ್ಪವಾದ ಕಟಿ, ದೊಡ್ಡದಾದ ಹಲ್ಲುಗಳು ಗಿಡ್ಡಾದ ಉಗುರು ಇದ್ದು ಎತ್ತರ ಉಳ್ಳವರೂ ಇರುತ್ತಾರೆ.

ಮಕರ— ಈ ರಾಶಿಯ ಜನರಲ್ಲಿರುವ ವೈಶಿಷ್ಟ್ಯವೆಂದರೆ ದೇಹದ ಎಲ್ಲ ಅವಯವಗಳ ಪ್ರಮಾಣಕ್ಕಿಂತ ಮುಖ ದೊಡ್ಡದಾಗಿರುತ್ತದೆ. ಅಗಲವಾದ

ಛಾಯಿ, ಗರ್ದ (ಹಸು) ಅತೀ ಸಣ್ಣದು, ಚಿಕ್ಕದಾದ ಸೊಂಟ ಇದ್ದು ಮಧ್ಯಮ ಎತ್ತರವುಳ್ಳ ಸ್ಥೂಲದೇಹ ಉಳ್ಳವರಿರುತ್ತಾರೆ.

ಕುಂಭ — ಈ ರಾಶಿಯ ಜನರಲ್ಲಿರುವ ವೈಶಿಷ್ಟ್ಯವೆಂದರೆ ಇವರ ಹಣೆಯು ಅತೀ ಎತ್ತರ ಅಥವಾ ಅತೀ ಚಿಕ್ಕ ಇರುತ್ತದೆ. ಡೊಂಕಾದ ಕುತ್ತಿಗೆ, ನರಗಳು ಉಬ್ಬಿಕೊಂಡಂಥ ಕಾಲುಗಳು ಚಿತ್ರವಿಚಿತ್ರ ಮುಖಗಳಿಂದ ಕ್ರೂರತರ ಬಿರ (ಬಿರುಸು) ವಾದ ಶರೀರ, ದೊಡ್ಡದಾದ ಬೆನ್ನಿನ ಹುರಿ, ಮಧ್ಯಮ ಎತ್ತರವುಳ್ಳವರಿರುತ್ತಾರೆ.

ಮೀನ — ಈ ರಾಶಿಯ ಜನರು ಅತೀ ವಯಸ್ಸಾಗಿದ್ದರೂ ಚಿಕ್ಕವರಂತೆ ಕಾಣುವ ದೇಹವುಳ್ಳವರು, ಎತ್ತರವಿಲ್ಲದವರು, ಚಪ್ಪಟೆ ಮುಖವುಳ್ಳವರೂ ಅಗಲವಾದ ಎದೆಯುಳ್ಳವರಿರುತ್ತಾರೆ.

ವ್ಯಕ್ತಿಗಳ ಮಲಗುವ ಬಗೆಯಿಂದ (ನಿದ್ರಾಭಂಗಿ) ಸ್ವಭಾವಗಳನ್ನು ಕಂಡು ಹಿಡಿಯಲು ಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ :—

ಮಲಗುವ ಪ್ರಕಾರಗಳಲ್ಲಿ ೯ ಪ್ರಕಾರಗಳನ್ನು ನೋಡಬಹುದು.

೧. ಬೆನ್ನು ಕೆಳಗೆ ಮಾಡಿ ನೇರವಾಗಿ ಅಂಗಾತವಾಗಿ ಮಲಗುವದು.

೨. ಬೆಕ್ಕಿನ ಮರಿಯಂತೆ ವರ್ತುಲಾಕಾರವಾಗಿ ಕಾಲುಗಳನ್ನು ಸುತ್ತಲೂ ಎಳೆದುಕೊಂಡು ಮಲಗುವ ಕ್ರಮ.

೩. ಹೊಟ್ಟೆಯ ಭಾಗ ಕೆಳಗಿರುವಂತೆ ಬೋರಲಾಗಿ ಮಲಗಿ ನಿದ್ರಿಸುವದು.

೪. ಎಡಭುಜ ಇಲ್ಲವೆ ಬಲಭುಜ ಹೀಗೆ ಒಂದೇ ಮಗ್ಗುಲಾಗಿ ಮಲಗುವ ಕ್ರಮ.

೫. ಹೊದಿಕೆಯನ್ನು ತುಂಬ ಹೊತ್ತುಕೊಂಡು ಮಲಗುವದು.

೬. ತಲೆದಿಂಬನ್ನು ಅವಚಿಕೊಂಡು ಮಲಗುವದು.

೭. ಹಾಸಿಗೆಯ ಮಧ್ಯದಲ್ಲಿ ಮಲಗುವದು.

೮. ಹಾಸಿಗೆಯ ಒಂದೇ ಬದಿಯಲ್ಲಿ ಮಲಗುವದು.

೯. ಕಾಲನ್ನು ಮಡುಚಿಕೊಂಡು ಮಲಗುವದು.

ಬೆನ್ನು ಕೆಳಗೆ ಮಾಡಿ ನೇರವಾಗಿ ಅಂಗಾತವಾಗಿ ನಿದ್ರಿಸುವವರು ಹೆಚ್ಚಾಗಿ ಸಿಂಹ, ವೃಶ್ಚಿಕ, ಧನು ಮಕರ ಈ ರಾಶಿಯವರೇ ಇರುವದು ಕಂಡು ಬರುತ್ತದೆ. ಏಕೆಂದರೆ ಹೀಗೆ ಮಲಗುವ ಈ ವ್ಯಕ್ತಿಗಳು ಅಹಂಭಾವವುಳ್ಳವರು ಹಾಗೂ ತಮ್ಮ ನಿಲುಮೆಯನ್ನು ಸಮರ್ಥಿಸಿಕೊಳ್ಳುವಂಥವರೂ ಇರುತ್ತಾರೆ.

ಹಾಸಿಗೆಯ ಮಧ್ಯದಲ್ಲಿ ಮಲಗುವವರು ಹೆಚ್ಚಾಗಿ ಸಿಂಹರಾಶಿಯವರಿರುತ್ತಾರೆ.

ಯಾರ ಜಾತಕದಲ್ಲಿ ಮಂಗಳನು ಕರ್ಕದಲ್ಲಿ ಇರುವನೋ ಅಂಥವರು ಹೆಚ್ಚಾಗಿ ಕಾಲನ್ನು ಮುದುರಿಕೊಂಡು ಮಲಗುವದು ಕಂಡುಬರುತ್ತದೆ.

ಬೆಕ್ಕಿನ ಮರಿಯಂತೆ ವರ್ತುಲಾಕಾರವಾಗಿ ಹಾಗೂ ಕಾಲುಗಳನ್ನು ಸುತ್ತಲೂ ಎಳೆದುಕೊಂಡು ಮಲಗುವವರು ಹೆಚ್ಚಾಗಿ ಕರ್ಕ, ಮೀನ ರಾಶಿಯವರಿದ್ದುದು ಕಂಡುಬರುತ್ತದೆ. ಏಕೆಂದರೆ ಇಂಥವರು ಒಂಟಿಜೀವಿಗಳಾಗಿರದೇ ಪರರ ಆಶ್ರಯವನ್ನು ಬಯಸುವವರಿರುತ್ತಾರೆ.

ಹೊಟ್ಟೆಯ ಭಾಗವು ಕೆಳಗಿರುವಂತೆ ಬೋರಲಾಗಿ (ದಬ್ಬು) ಮಲಗುವವರು ಹೆಚ್ಚಾಗಿ ಮೇಷ, ವೃಷಭ ರಾಶಿಯವರಿರುತ್ತಾರೆ ಏಕೆಂದರೆ ಇವರು ಅನೇಕ ಮನೋವಿಕಾರಗಳಿಂದ ತೊಳಲಾಡುತ್ತಿರುವದು ಕಂಡುಬರುತ್ತದೆ.

ತಲೆಯನ್ನು ಸೇರಿಸಿ ಪೂರ್ತಿ ಹೊದ್ದುಕೊಂಡು ಮಲಗುವವರು ಹೆಚ್ಚಾಗಿ ಮಿಥುನ, ಕುಂಭ ರಾಶಿಯವರಿರುವದು ಕಂಡುಬರುತ್ತದೆ. ಏಕೆಂದರೆ ಇವರು ಬಹಳ ಆಶಾವಾದಿಗಳು ಇರುತ್ತಾರೆ.

ತಲೆದಿಂಬನ್ನು ತಬ್ಬಿಕೊಂಡು ನಿದ್ರಿಸುವವರು ಹೆಚ್ಚಾಗಿ ತುಲಾ ರಾಶಿಯವರಿರುವದು ಕಂಡುಬರುತ್ತದೆ. ಏಕೆಂದರೆ ಇಂಥವರು ಹೆಚ್ಚಾಗಿ ಪ್ರೀತಿ ವಿಶ್ವಾಸಗಳನ್ನು ಬಯಸುವವರಿರುತ್ತಾರೆ.

ಹಾಸಿಗೆಯ ಒಂದೇ ಬದಿಗೆ ತಲೆಯನ್ನು ಕೈಮೇಲೆ ಇಟ್ಟುಕೊಂಡು ಮಲಗುವವರು ಹೆಚ್ಚಾಗಿ ಕರ್ಕ, ಕನ್ಯಾ ರಾಶಿಯವರಿರುವದು ಕಂಡುಬರುತ್ತದೆ.

ಜಲತತ್ವದ ರಾಶಿಗಳಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರು ದೀರ್ಘ (ನಿದ್ದೆಬಡಕರು) ಕಾಲ ನಿದ್ರಿಸುತ್ತಾರೆ.

ಜಲರಾಶಿಯ ಜನರ ತರುವಾಯ ಬಹಳ ಸಮಯ ನಿದ್ರೆ ಮಾಡುವವರೆಂದರೆ ಭೂತತ್ವದ ರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಯವರಿರುವದು ಕಂಡುಬರುತ್ತದೆ.

ವಾಯುತತ್ವದ ರಾಶಿಗಳಾದ ಮಿಥುನ, ತುಲಾ, ಕುಂಭ ಈ ರಾಶಿಯ ಜನರು ಅತ್ಯಲ್ಪ ಕಾಲ ನಿದ್ದೆ ಮಾಡುವರು ಹಾಗೂ ಈ ರಾಶಿಯ ಜನರ ನಿದ್ದೆ ಶ್ವಾನ ನಿದ್ರೆಯಂತಿರುತ್ತದೆ ಅಂದರೆ ಸ್ವಲ್ಪ ಸಪ್ಪಳವಾದರೂ ಬಹು ಬೇಗ ಎಚ್ಚರಗೊಳ್ಳುವರು.

ವಾಯುತತ್ವದ ತರುವಾಯ ಕಡಿಮೆ ನಿದ್ದೆ ಮಾಡುವವರೆಂದರೆ ಅಗ್ನಿ ತತ್ವದ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿರುವದು ಕಂಡುಬರುತ್ತದೆ.

ಜಾತಕದ ದ್ವಾದಶ ಸ್ಥಾನಾಧಿಪತಿಯು ಬಲವಂತನಿದ್ದರೆ ಇಲ್ಲವೆ ಬಲಾಢ್ಯ ಶುಕ್ರ, ಚಂದ್ರರು ದ್ವಾದಶ ಸ್ಥಾನದಲ್ಲಿದ್ದ ವ್ಯಕ್ತಿಗಳಿಗೆ ನಿದ್ರಾ ಸೌಖ್ಯ ಪೂರ್ಣ ಲಭಿಸುತ್ತದೆ.

ಯಾರೊಬ್ಬರ ತಿನ್ನುಣ್ಣುವ ಪದಾರ್ಥಗಳ ರುಚಿ ಅಭಿರುಚಿಗಳಿಂದ ಹಾಗೂ ತಿನ್ನುಣ್ಣುವ ಕ್ರಮಗಳ ಮೇಲಿಂದ ಅವರವರ ಜನ್ಮರಾಶಿಗಳನ್ನು ಖಚಿತಪಡಿಸಲು ಸಹಾಯವಾಗುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ—

೧ ವೃಷಭ, ಕರ್ಕ, ಕನ್ಯಾ ಈ ರಾಶಿಯ ಜನರು ಕೊಬ್ಬರಿಯುತ್ತಾರೆ ಹಾಗೂ ಅನೇಕ ತರದ ಪಕ್ವಾನ್ನಾದಿಗಳನ್ನು ತಯಾರಿಸುವದಕ್ಕೂ ಪರೀಕ್ಷಿಸುವ ದಕ್ಕಾಗಲೀ ಸಿದ್ಧಹಸ್ತರಿರುತ್ತಾರೆ.

೨ ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯ ಜನರು ಹೆಚ್ಚಾಗಿ ಮಾಂಸಾಹಾರ ಪ್ರಿಯರಿರುತ್ತಾರೆ. ಇಲ್ಲವೆ ಇವರು ಸಿಹಿ, ಸ್ನಿಗ್ಧ ಉಚ್ಚತರದ ಪೌಷ್ಟಿಕ ಆಹಾರವನ್ನು ಸೇವಿಸುವರು.

೩ ಕರ್ಕ ಹಾಗೂ ಮೀನ ರಾಶಿಯ ಜನರು ಹೆಚ್ಚಾಗಿ ಸೋಡಾ, ಶರಬತ್ತು, ಮಜ್ಜಿಗೆ ಮುಂತಾದ ತಂಪಾದ ಪಾನೀಯಗಳನ್ನು ಸೇವಿಸುತ್ತಾರೆ.

೪ ಕನ್ಯಾ, ತುಲಾ, ಕುಂಭ ಈ ರಾಶಿಯ ಜನರು ಮಸಾಲೆಯ ಹಾಗೂ ಕರಿದ ಪದಾರ್ಥಗಳನ್ನು ಹೆಚ್ಚಾಗಿ ಸೇವಿಸುತ್ತಾರೆ.

೫ ಮೇಷ, ಮಿಥುನ, ಕುಂಭ ಈ ರಾಶಿಯ ಜನರು ಆಹಾರ ಕಡಿಮೆ ತಿನ್ನುವರು ಎಂದರೆ ಊಟ ಕಡಿಮೆ ಮಾಡುತ್ತಾರೆ. ಆದರೆ ಇವರು ಮೇಲಿನ ತಿಂಡಿ, ತಿನಿಸುಗಳನ್ನು ಅನೇಕ ಸಾರೆ ಸೇವಿಸುತ್ತಾರೆ.

೬. ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಯ ಜನರು ಹೆಚ್ಚಾಗಿ ಹುಳಿ ಪದಾರ್ಥಗಳನ್ನು ಸೇವಿಸುತ್ತಾರೆ.

೭. ಮೇಷ, ಸಿಂಹ, ಧನು ಈ ರಾಶಿಯ ಜನರು ಉಷ್ಣ ಹಾಗೂ ಖಾರ ಪದಾರ್ಥಗಳನ್ನು ಹೆಚ್ಚಾಗಿ ಸೇವಿಸುತ್ತಾರೆ.

ಜಾತಕದ ದ್ವಿತೀಯ ಸ್ಥಾನದಲ್ಲಿ ಗುರು ಇದ್ದ ವ್ಯಕ್ತಿಗಳು ಸಿಹಿ ಪದಾರ್ಥ ಗಳನ್ನು ಹೆಚ್ಚು ಸೇವಿಸುತ್ತಾರೆ.

ಶುಕ್ರನು ದ್ವಿತೀಯ ಸ್ಥಾನದಲ್ಲಿದ್ದ ವ್ಯಕ್ತಿಗಳು ಹುಳಿ ಪದಾರ್ಥಗಳನ್ನು ಹೆಚ್ಚು ಸೇವಿಸುತ್ತಾರೆ.

ರವಿ, ಮಂಗಳರು ದ್ವಿತೀಯ ಸ್ಥಾನದಲ್ಲಿದ್ದ ವ್ಯಕ್ತಿಗಳು ಹೆಚ್ಚಾಗಿ ಖಾರ ಹಾಗೂ ಉಷ್ಣ ಪದಾರ್ಥಗಳನ್ನು ಸೇವಿಸುತ್ತಾರೆ.

ಶುಕ್ರ-ಚಂದ್ರ ಇಲ್ಲವೆ ಶುಕ್ರ-ಮಂಗಳ ದ್ವಿತೀಯ ಸ್ಥಾನದಲ್ಲಿದ್ದ ವ್ಯಕ್ತಿ ಗಳು ಎಣ್ಣೆಯ, ಇಲ್ಲವೇ ಮಸಾಲೆಯ ಸಾಮಾನುಗಳನ್ನು ಹೆಚ್ಚಾಗಿ ಸೇವಿಸು ತ್ತಾರೆ.

ಪೃಥ್ವಿ ಹಾಗೂ ಅಗ್ನಿ ತತ್ವದ ರಾಶಿಯ ಜನರು ಹೆಚ್ಚು ಆಹಾರವನ್ನು ಸೇವಿಸುತ್ತಾರೆ. ಅದರಲ್ಲಿಯೂ ಪೃಥ್ವಿ ತತ್ವದ ರಾಶಿಯ ಜನರು ಕೂಳ ಬಕ್ಕರಿಯತ್ತಾರೆ.

ಜಲರಾಶಿಯ ಜನರು ಮಿತಾಹಾರವನ್ನು ಸೇವಿಸುತ್ತಾರೆ ಮತ್ತು ಇವರು ನಿಯಮಿತವಾಗಿಯೂ ನೈಮಿತ್ಯವಾಗಿಯೂ ಆಹಾರ ಸೇವಿಸುತ್ತಾರೆ.

ವಾಯು ತತ್ವದ ರಾಶಿಯ ಜನರು ಅತ್ಯಲ್ಪ ಆಹಾರ ಸೇವಿಸುತ್ತಾರೆ.

## ಮುಖ ಜ್ಯೋತಿಷ್ಯ

ಮಾನವನ ಶರೀರ ರಚನೆಯ ಮೇಲಿಂದ, ವಿಶೇಷವಾಗಿ ಮುಖ ಲಕ್ಷಣಗಳ ಮೇಲಿಂದ ಲಗ್ನಗಳನ್ನು ಗುರುತಿಸಲು ಹಾಗೂ ನಿರ್ಧರಿಸಲು ಸಹಾಯವಾಗುತ್ತದೆ. ಅವುಗಳ ವಿವರಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ—

—:ಮುಖಲಕ್ಷಣಗಳಲ್ಲಿಯ ಪ್ರಕಾರಗಳು:—

ಮುಖ ಲಕ್ಷಣಗಳನ್ನು ನಾಲ್ಕು ಪ್ರಕಾರವಾಗಿ ವಿಂಗಡಿಸಬಹುದು—

೧. ವರ್ತುಳ (ದುಂಡನ್ನ) ಮುಖ.
೨. ಉದ್ದ (ದೀರ್ಘವರ್ತುಳ) ಮುಖ.
೩. ತ್ರಿಕೋಣ ಮುಖ,
೪ ಚೌಕೋನ ಮುಖ

ಹೀಗೆ ಸ್ಥೂಲವಾಗಿ ನಾಲ್ಕು ಪ್ರಕಾರವಾಗಿ ಮುಖ ಲಕ್ಷಣಗಳನ್ನು ವಿಂಗಡಿಸಬಹುದು.

### ೧. ವರ್ತುಳಾಕೃತಿಯ ಮುಖಲಕ್ಷಣದ ವೈಶಿಷ್ಟ್ಯ

ಈ ಪ್ರಕಾರದ ಮುಖ ಲಕ್ಷಣಗಳೆಂದರೆ; ತುಂಬಿದ, ಉಬ್ಬಿದ ಗಲ್ಲಗಳು ಮತ್ತು ಗಲ್ಲಗಳು ಹೆಚ್ಚು ದುಂಡಗಾಗಿರುತ್ತವೆ. ಹನು (ಗದ್ದ) ಭಾಗವೂ ಕೂಡ ದುಂಡ ಹಾಗೂ ದಪ್ಪವಾಗಿರುತ್ತದೆ. ಹಣೆಯೂ ಕೂಡ ದುಂಡಗಿರುತ್ತದೆ. ಹೀಗೆ ಮುಖದ ಎಲ್ಲ ಭಾಗವೂ ದುಂಡುದುಂಡಗಿರುತ್ತದೆ.

ಹೆಚ್ಚಾಗಿ ಮೇಷ, ಸಿಂಹ, ಧನು ಈ ಲಗ್ನಗಳಲ್ಲಿ ಜನಿಸಿದವರು ವರ್ತುಲ ಮುಖ ಲಕ್ಷಣಗಳುಳ್ಳವರಿರುತ್ತಾರೆ.

### ೨. ಲಂಬಾಕೃತಿಯ ಮುಖಲಕ್ಷಣದ ವೈಶಿಷ್ಟ್ಯ

ಈ ಉದ್ದ ಮುಖಕ್ಕೆ ದೀರ್ಘ ವರ್ತುಳವೆಂದೂ ಅನ್ನುವರು ಈ ಪ್ರಕಾರದ ಮುಖಲಕ್ಷಣಗಳು ಹೀಗಿರುತ್ತವೆ:—

ಕಣ್ಣು, ಮೂಗು, ಸಣ್ಣದಿರಲಿ ದೊಡ್ಡದಿರಲಿ ಆದರೆ ಆಕಾರದಲ್ಲಿ ಮಾತ್ರ

ಉದ್ದವಿರುತ್ತವೆ. ಹಣೆಯ ಭಾಗವೂ ಕಿರಿದಾಗಿದ್ದು ಮುಖದ ಆಕಾರ ಉದ್ದವಿರುತ್ತವೆ. ಗಲ್ಲಗಳು ಉದ್ದವಿದ್ದು ಚಪ್ಪಟೆಯಾಗಿ ಒಳಗೆ ಕೂತಂತಿರುತ್ತವೆ. ಎರಡೂ ಗಲ್ಲಗಳು ಉದ್ದವಿರುತ್ತವೆ.

ಈ ಪ್ರಕಾರದ ಲಕ್ಷಣಗಳು ಹೆಚ್ಚಾಗಿ ವೃಷಭ, ಮಿಥುನ, ತುಲಾ ಈ ಲಗ್ನಗಳಲ್ಲಿದ್ದವರಲ್ಲಿ ಕಂಡುಬರುತ್ತವೆ.

### ೩. ತ್ರಿಕೋಣಾಕೃತಿಯ ಮುಖಲಕ್ಷಣದ ವೈಶಿಷ್ಟ್ಯ

ಈ ತರಹದ ಜನರ ಮುಖ ಲಕ್ಷಣಗಳೆಂದರೆ ಕಣ್ಣುಗಳು ದೊಡ್ಡವೇ ಇರಲಿ ಅಥವಾ ಸಣ್ಣವೇ ಇರಲಿ ಹಣೆಯ ಭಾಗವು ವಿಸ್ತಾರವಾಗಿದ್ದು ಎರಡೂ ಗಲ್ಲಗಳ ಭಾಗಗಳು ಉದ್ದ ಹಾಗೂ ತೆಳ್ಳಗೆ ಒಳಸೇರಿದ್ದು ಹನುಭಾಗದಲ್ಲಿ ಚೂಪಾಗಿ ಕೂಡಿಕೊಂಡಿರುತ್ತವೆ. ಹೀಗೆ ಮುಖಾಕೃತಿಯು ತ್ರಿಕೋಣಾಕೃತಿಯಂತೆ ಕಾಣುವುದೇ ಈ ಮುಖದ ಲಕ್ಷಣವು

ಹೆಚ್ಚಾಗಿ ವೃಶ್ಚಿಕ, ಮಕರ ಹಾಗೂ ಮೀನ ಈ ಲಗ್ನಗಳ ವ್ಯಕ್ತಿಗಳು ತ್ರಿಕೋಣ ಮುಖಲಕ್ಷಣಗಳುಳ್ಳವರಿರುತ್ತಾರೆ.

### ೪. ಚೌಕೋನಾಕೃತಿಯ ಮುಖಲಕ್ಷಣಗಳು

ಚೌಕೋನಾಕೃತಿಯ ಜನರ ಮುಖಲಕ್ಷಣಗಳೆಂದರೆ ಇವರ ಹಣೆ, ಹನುವಟು ಮತ್ತು ಗಲ್ಲಗಳು ಹೀಗೆ ಮುಖದ ಎಲ್ಲ ಲಕ್ಷಣಗಳು ಚೌಕಾಗಿರುತ್ತವೆ.

ಹೆಚ್ಚಾಗಿ ಕರ್ಕ, ಕನ್ಯಾ, ಕುಂಭ ಈ ಲಗ್ನಗಳ ವ್ಯಕ್ತಿಗಳು ಚೌಕೋನಾಕೃತಿಯ ಮುಖಲಕ್ಷಣಗಳುಳ್ಳವರಿರುತ್ತಾರೆ.

ಹೀಗೆ ಮುಖಲಕ್ಷಣಗಳಲ್ಲಿ ನಾಲ್ಕು ವಿಧವಾಗಿ ವಿಂಗಡಿಸಿದರೂ ಕೆಲವೊಮ್ಮೆ ಆಪವಾದಾತ್ಮಕವಾಗಿ ಮತ್ತು ಸಂದಿಗ್ಧ ಲಗ್ನಗಳಿಂದುಂಟಾಗಿ ವಿಭಿನ್ನತೆಯೂ ಕಂಡುಬರುತ್ತದೆ. ವಿಭಿನ್ನತೆಯ ಉದಾಹರಣೆ ಈ ಕೆಳಗಿನಂತೆ ಕೊಡಲಾಗಿದೆ—

೧. ಕರ್ಕಲಗ್ನದ ವ್ಯಕ್ತಿಗಳು ಹೆಚ್ಚಾಗಿ ಚೌಕೋನಾಕೃತಿಯ ಮುಖ

ಲಕ್ಷಣಗಳುಳ್ಳವರಿರುತ್ತಿದ್ದರೂ, ವರ್ತುಲಾಕಾರದ ಮುಖಲಕ್ಷಣವುಳ್ಳ ಜನರೂ ನೋಡಲು ಸಿಗುತ್ತಾರೆ

೨. ಕುಂಭಲಗ್ನದ ವ್ಯಕ್ತಿಗಳು ಹೆಚ್ಚಾಗಿ ಚೌಕೋನಾಕೃತಿ ಮುಖ ಲಕ್ಷಣಗಳಿದ್ದಾಗ್ಯೂ, ತ್ರಿಕೋಣಾಕೃತಿಯ ಮುಖ ಲಕ್ಷಣವುಳ್ಳ ಜನರೂ ನೋಡಲು ಸಿಗುತ್ತಾರೆ.

೩. ಕನ್ಯಾಲಗ್ನದ ಜನರು ಹೆಚ್ಚಾಗಿ ಚೌಕೋನಾಕೃತಿಯ ಮುಖ ಲಕ್ಷಣ ಉಳ್ಳವರಿರುತ್ತಿದ್ದರೂ ವರ್ತುಲಾಕೃತಿಯ ಮುಖಲಕ್ಷಣ ಉಳ್ಳ ಜನರೂ ನೋಡಲು ದೊರೆಯುತ್ತಾರೆ.

೪. ಮೀನ ಲಗ್ನದ ವ್ಯಕ್ತಿಗಳು ಹೆಚ್ಚಾಗಿ ತ್ರಿಕೋಣಾಕೃತಿಯ ಮುಖ ಲಕ್ಷಣ ಉಳ್ಳವರಿದ್ದರೂ ಲಂಬಾಕೃತಿಯ (ಉದ್ದ) ಮುಖಲಕ್ಷಣ ಉಳ್ಳ ಜನರೂ ಇರುತ್ತಾರೆ.

೫. ವೃಷಭ ತುಲಾ ಲಗ್ನಗಳ ವ್ಯಕ್ತಿಗಳು ಹೆಚ್ಚಾಗಿ ಲಂಬಾಕೃತಿ ಮುಖಲಕ್ಷಣ ಉಳ್ಳವರಿದ್ದಾಗ್ಯೂ, ತ್ರಿಕೋಣಾಕೃತಿಯ ಮುಖಲಕ್ಷಣ ಉಳ್ಳ ಜನರೂ ಇರುತ್ತಾರೆ.

೬. ವೃಶ್ಚಿಕ ಲಗ್ನದ ವ್ಯಕ್ತಿಗಳು ಹೆಚ್ಚಾಗಿ ತ್ರಿಕೋಣಾಕೃತಿಯ ಮುಖ ಲಕ್ಷಣಗಳುಳ್ಳವರಿದ್ದಾಗ್ಯೂ, ಅವರ ತುಂಬಿದ, ಉಬ್ಬಿದ ಗಲ್ಲಗಳ ಮೇಲಿಂದ ವರ್ತುಲಾಕಾರದ ಮುಖಲಕ್ಷಣಗಳುಳ್ಳವರಂತೆ ಕಾಣಿಸುತ್ತಾರೆ.

ಹೀಗೆ ಸಂದಿಗ್ಧ ಲಗ್ನಗಳಲ್ಲಿ ವಿಭಿನ್ನತೆ ಉಂಟಾಗಬಹುದು. ಆದುದರಿಂದ ಮೇಲೆ ಬರೆದ ಮುಖಲಕ್ಷಣಗಳ ಸ್ಥೂಲ ಪ್ರಕಾರಗಳನ್ನು ಜಾತಕವನ್ನು ನಿರ್ಣಯಿಸುವಾಗ, ಖಚಿತಪಡಿಸುವಾಗ ಯೋಚಿಸಬೇಕಾಗುತ್ತದೆ.

## ನೇತ್ರಾವಲೋಕನದಿಂದ ರವಿ, ಚಂದ್ರರ ರಾಶಿಬಲವನ್ನು ನಿರ್ಧರಿಸುವ ಕ್ರಮ

ಯಾರೊಬ್ಬ ವ್ಯಕ್ತಿಯ ಕೇವಲ ನೇತ್ರಾವಲೋಕನೆಯಿಂದ ಆ ವ್ಯಕ್ತಿಯ ಜಾತಕದಲ್ಲಿ ರವಿ-ಚಂದ್ರರ ರಾಶಿಬಲವನ್ನು ನಿರ್ಧರಿಸಲು ಬರುತ್ತದೆ. ಬಲಗಣ್ಣಿನ ಅವಲೋಕನೆಯಿಂದ ರವಿಯ ರಾಶಿಯ ಬಲವನ್ನೂ ಎಡಗಡೆಯ ಕಣ್ಣನ್ನು

ವೀಕ್ಷಿಸುವವರಿಂದ ಚಂದ್ರನ ರಾಶಿಫಲವನ್ನು ಸ್ಥೂಲವಾಗಿ ತಿಳಿಯಲು ಸಹಾಯವಾಗುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ.

೧. ರವಿಯು ಮೇಷರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣು ದೊಡ್ಡದು, ಗುಡ್ಡೆಯೂ ದೊಡ್ಡದು ಕಪ್ಪಾಗಿರುತ್ತದೆ ಮತ್ತು ಕಣ್ಣಿನ ಬಿಳಿಯ ಭಾಗದಲ್ಲಿ ಚುಕ್ಕೆ (ಗೆರೆ) ಇರುತ್ತದೆ.

೨. ರವಿಯು ವೃಷಭ ರಾಶಿಯಲ್ಲಿದ್ದ ವ್ಯಕ್ತಿಗಳ ಕಣ್ಣುಗಳು ಸಣ್ಣವಿರುತ್ತವೆ ಮತ್ತು ಗುಳಿ ಬಿದ್ದ (ಒಳಗೆ ಹೋದಂತೆ) ಹಾಗೆ ಇರುತ್ತವೆ. ಇವರ ಕಣ್ಣಿನ ಗುಡ್ಡೆಗಳು ಕಪ್ಪಾಗಿದ್ದು ಗುಡ್ಡೆಯ ಸುತ್ತಲಿನ ಭಾಗ ಕಪ್ಪಾಗಿರುತ್ತದೆ

೩. ರವಿಯು ಮಿಥುನ ರಾಶಿಯಲ್ಲಿದ್ದ ವ್ಯಕ್ತಿಗಳ ಕಣ್ಣುಗಳು ದೊಡ್ಡವಿದ್ದು ಕಣ್ಣಿನ ಗುಡ್ಡೆಗಳು ಮುಂದೆ ಬಂದಂತಿರುತ್ತವೆ. ಮತ್ತು ಗುಡ್ಡೆಯ ಬಣ್ಣ ನಸುಗೆಂಪಾಗಿರುತ್ತದೆ ಮತ್ತು ಗುಡ್ಡೆಯ ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೪. ರವಿಯು ಕರ್ಕ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ದೊಡ್ಡವಿದ್ದು ಕಣ್ಣಿನ ರೆಪ್ಪೆಗಳು ಉದ್ದವಿರುತ್ತವೆ. ಗುಡ್ಡೆ ಹಾಗೂ ಗುಡ್ಡೆಯ ಸುತ್ತಲಿನ ಭಾಗ ನಸುಗೆಂಪು ಇರುತ್ತದೆ.

೫. ರವಿಯು ಸಿಂಹರಾಶಿಯು ಇದ್ದ ವ್ಯಕ್ತಿಗಳ ಕಣ್ಣುಗಳು ದೊಡ್ಡವಿದ್ದು ಕಣ್ಣಿನ ಗುಡ್ಡೆಗಳು ನಸುಗೆಂಪು ಇದ್ದು ಅದರ ಸುತ್ತಲಿನ ಭಾಗ ಕೆಂಪಗಿದ್ದು ಅದರ ಮೇಲೆ ಕೆಂಪು ರೇಖೆ ಇರುತ್ತದೆ.

೬. ರವಿಯು ಕನ್ಯಾ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಾಧಾರಣವಿದ್ದು ಗುಡ್ಡೆ ಮಾತ್ರ ಸಣ್ಣದಿದ್ದು ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೭. ರವಿಯು ತುಲಾ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಚಿಕ್ಕವಿದ್ದು ಗುಡ್ಡೆ ಹಾಗೂ ಅದರ ಸುತ್ತಲಿನ ಭಾಗ ಮಾತ್ರ ಕಪ್ಪಗಿರುತ್ತದೆ.

೮. ರವಿಯು ವೃಶ್ಚಿಕ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿದ್ದು ಮತ್ತು ಬೆಕ್ಕಿನ ಕಣ್ಣಿನ ಹಾಗೆ ಇರುತ್ತವೆ. ಕೆಳಗಿನ ರೆಪ್ಪೆ ಮಾತ್ರ ದಪ್ಪವಿರುತ್ತವೆ. ಗುಡ್ಡೆ ನಸುಗೆಂಪು, ಅದರ ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೯. ರವಿಯು ಧನು ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ದೊಡ್ಡವಿದ್ದು ಗುಡ್ಡೆಯು ಕರ್ರಗಿರುತ್ತದೆ ಹಾಗೂ ಮುಂದೆ ಬಂದಹಾಗಿರುತ್ತದೆ. ದೃಷ್ಟಿಯು ಉಗ್ರವಿರುತ್ತದೆ. ಗುಡ್ಡೆಯ ಸುತ್ತಲಿನ ಭಾಗ ನಸುಗೆಂಪಿರುತ್ತದೆ.

೧೦. ರವಿಯು ಮಕರ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ. ಗುಡ್ಡೆಯು ಸಣ್ಣ ಹಾಗೂ ಕರ್ರಗಿರುತ್ತದೆ. ಅದರ ಸುತ್ತಲಿನ ಭಾಗ ಸಹಿತ ಕರ್ರಗಿರುತ್ತದೆ.

೧೧. ರವಿಯು ಕುಂಭರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ. ಹಾಗೂ ಬೆಕ್ಕಿನ ಕಣ್ಣಿನಂತಿರುತ್ತವೆ. ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೧೨. ರವಿಯು ಮೀನ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ. ಗುಡ್ಡೆ ಕರ್ರಗಿದ್ದು ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

### ಚಂದ್ರನ ಮೇಲಿಂದ ಕಣ್ಣಿನ ರೂಪರೇಷೆಗಳ ವಿಂಗಡಣೆ

೧. ಚಂದ್ರನು ಮೇಷ ರಾಶಿಯಲ್ಲಿದ್ದ ವ್ಯಕ್ತಿಯ ಬಲಗಣ್ಣಿಗಿಂತಲೂ ಎಡಗಣ್ಣು ದೊಡ್ಡದಿರುತ್ತದೆ. ಹಾಗೂ ಒಳಗುಡ್ಡೆಯು ಕರ್ರಗಿದ್ದು ಅದರ ಸುತ್ತಲಿನ ಭಾಗ ನಸುಗೆಂಪಿರುತ್ತದೆ ಮತ್ತು ಕೆಳಗಿನ ರೆಪ್ಪೆ ದಪ್ಪವಾಗಿರುತ್ತದೆ.

೨. ಚಂದ್ರನು ವೃಷಭ ರಾಶಿಯಲ್ಲಿದ್ದ ವ್ಯಕ್ತಿಗಳ ಕಣ್ಣುಗಳು ಸಣ್ಣವಿದ್ದರೂ ತೇಜಸ್ಪುಂಜವಿರುತ್ತವೆ. ಗುಡ್ಡೆಯು ಕರ್ರಗಿರುತ್ತದೆ. ಅದರ ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೩. ಚಂದ್ರನು ಮಿಥುನ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ನಸುಗೆಂಪಾಗಿರುತ್ತವೆ ಹಾಗೂ ದೊಡ್ಡವಾಗಿರುತ್ತವೆ. ಗುಡ್ಡೆಯ ಬಣ್ಣ ಕರ್ರಗಿದ್ದರೂ ಸುತ್ತಲಿನ ಭಾಗ ಕೇಸರಿ ಬಣ್ಣದ್ದಿರುತ್ತದೆ.

೪. ಚಂದ್ರನು ಕರ್ಕ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ದೊಡ್ಡವಿರುತ್ತವೆ. ಕಣ್ಣಿನ ಗುಡ್ಡೆ ಸಣ್ಣವಿರುತ್ತವೆ. ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

ಅವರ ಇತರ ಕಣ್ಣುಗಳ ವೈಶಿಷ್ಟ್ಯವೆಂದರೆ ಅಂಥವರ ಕಣ್ಣುಗಳು ನೀರ್ಗಟ್ಟಾಗಿ ಇರುತ್ತವೆ.

೫. ಚಂದ್ರನು ಸಿಂಹ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿದ್ದು ಕರ್ರಗಿರುತ್ತವೆ. ಕಣ್ಣಿನ ಗುಡ್ಡೆ ನಸುಗೆಂಪಿರುತ್ತದೆ ಹಾಗೂ ಅದರ ಸುತ್ತಲಿನ ಭಾಗ ಬೆಳ್ಳಗಿರುತ್ತದೆ.

೬. ಚಂದ್ರನು ಕನ್ಯಾರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ದೊಡ್ಡವಿರುತ್ತವೆ ಹಾಗೂ ಕಣ್ಣಿನ ಗುಡ್ಡೆಯೂ ದೊಡ್ಡದು, ಅದರ ಸುತ್ತಲಿನ ಭಾಗ ನಸುಗೆಂಪಿರುತ್ತದೆ ಮತ್ತು ಕಣ್ಣು ಪ್ರಭಾಪೀ ಇರುತ್ತವೆ.

೭. ಚಂದ್ರನು ತುಲಾ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣ ಹಾಗೂ ಕರ್ರಗಿರುತ್ತವೆ. ಕಣ್ಣಿನ ಗುಡ್ಡೆ ಕರ್ರಗಿರುತ್ತದೆ. ಅದರ ಸುತ್ತಲಿನ ಭಾಗ ಬೆಳ್ಳಗಿರುತ್ತದೆ ಕಣ್ಣುಗಳು ಆಕರ್ಷಕವಿರುತ್ತವೆ.

೮. ಚಂದ್ರನು ವೃಶ್ಚಿಕ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣು ದೊಡ್ಡದು ಹಾಗೂ ಗುಡ್ಡೆ ದೊಡ್ಡದು. ಮತ್ತು ಗುಡ್ಡೆಯ ಸುತ್ತುಮುತ್ತಲೂ ನಸುಗೆಂಪಿರುತ್ತವೆ.

೯. ಚಂದ್ರನು ಧನು ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ದೊಡ್ಡವು ಕಣ್ಣಿನ ಗುಡ್ಡೆ ದೊಡ್ಡ ಹಾಗೂ ಕರ್ರಗಿರುತ್ತವೆ. ಅದರ ಸುತ್ತಲಿನ ಭಾಗ ನಸುಗೆಂಪಾಗಿರುತ್ತದೆ.

೧೦. ಚಂದ್ರನು ಮಕರ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ. ಗುಡ್ಡೆಯು ದೊಡ್ಡದಿರುತ್ತದೆ. ಅದರ ಸುತ್ತಲಿನ ಭಾಗ ಕರ್ರಗಿರುತ್ತದೆ. ಗುಡ್ಡೆಯ ಬಣ್ಣ ನಸುಗೆಂಪಿರುತ್ತದೆ.

೧೧. ಚಂದ್ರನು ಕುಂಭ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ ಹಾಗೂ ಬಣ್ಣ ನಸುಗೆಂಪಿರುತ್ತದೆ. ಗುಡ್ಡೆ ದೊಡ್ಡದಿರುತ್ತದೆ. ಸುತ್ತಲಿನ ಭಾಗ ಬೆಳ್ಳಗಿದ್ದು ಆಕರ್ಷಕವಿರುತ್ತದೆ.

೧೨. ಚಂದ್ರನು ಮೀನ ರಾಶಿಯಲ್ಲಿದ್ದ ವ್ಯಕ್ತಿಯ ಕಣ್ಣುಗಳು ಸಣ್ಣವಿರುತ್ತವೆ ಗುಡ್ಡೆ ದೊಡ್ಡದಿರುತ್ತದೆ. ಕಣ್ಣಿನ ಬಣ್ಣ ಕರ್ರಗಿದ್ದು ಸುತ್ತುಮುತ್ತಲಿನ ಭಾಗ ಬೆಳ್ಳಗಿರುತ್ತದೆ ಮತ್ತು ಇವರ ಕಣ್ಣುಗಳು ನೀರ್ಗಟ್ಟಾಗಿರುತ್ತವೆ.

## ಕರ್ಣಾವಲೋಕನದಿಂದ ಗುರುವಿನ ರಾಶಿಯನ್ನು ಕಂಡುಹಿಡಿಯುವ ಕ್ರಮಗಳು

ಯಾರೊಬ್ಬ ವ್ಯಕ್ತಿಯ ಕೇವಲ ಕರ್ಣಾವಲೋಕನದಿಂದ ಆ ವ್ಯಕ್ತಿಯ ಜಾತಕದಲ್ಲಿ ಗುರು ಯಾವ ರಾಶಿಯಲ್ಲಿರುವನು ಎಂಬುದನ್ನು ಕಂಡು ಹಿಡಿಯಲು ಬರುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ:—

೧. ಗುರು ಮೇಷ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ಚಿಕ್ಕದಾಗಿರುತ್ತವೆ, ಕಣ್ಣಿನ ಬಣ್ಣ ಕಪ್ಪಾಗಿರುತ್ತದೆ ಮತ್ತು ಕಣ್ಣಿನ ಹಾಗೂ ಕಿವಿಯ ಮಧ್ಯದಲ್ಲಿ ೨-೩ ತಿಳುವಾದ ಗೆರೆಗಳಿರುತ್ತವೆ.

೨. ಗುರು ವೃಷಭ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ಉದ್ದ ಹಾಗೂ ದೊಡ್ಡವಿರುತ್ತವೆ.

೩. ಗುರು ಮಿಥುನ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ಸಣ್ಣವಿರುತ್ತವೆ. ಕಣ್ಣು ಹಾಗೂ ಕಿವಿಯ ಮಧ್ಯಭಾಗ ಅಗಲವಿರುತ್ತದೆ.

೪. ಗುರು ಕರ್ಕ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ದೊಡ್ಡವಿರುತ್ತವೆ. ಕಣ್ಣು ಕಿವಿಯ ಮಧ್ಯಭಾಗ ದೊಡ್ಡದಿರುತ್ತದೆ.

೫. ಗುರು ಸಿಂಹ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ಸಣ್ಣವಿದ್ದು ಕಣ್ಣು-ಕಿವಿಯ ಭಾಗ ಅಗಲವಿರುತ್ತದೆ.

೬. ಗುರು ಕನ್ಯಾ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ದೊಡ್ಡವಿರುತ್ತವೆ ಹಾಗೂ ಕಣ್ಣು-ಕಿವಿಗಳ ಮಧ್ಯಭಾಗ ದೊಡ್ಡದಿರುತ್ತದೆ.

೧೨. ಗುರು ಮೀನ ರಾಶಿಯಲ್ಲಿದ್ದ ವ್ಯಕ್ತಿಯ ಕಿವಿಗಳು ದೊಡ್ಡವಿರು ವಿರುತ್ತವೆ.

### ಕರ್ಣಾವಲೋಕನದಿಂದ ಜನನ ಸಮಯವನ್ನು ನಿರ್ಧರಿಸುವ ಕ್ರಮ

ಯಾರೊಬ್ಬ ವ್ಯಕ್ತಿಯ ಜನ್ಮ ಹಗಲು ಆಗಿದೆಯೋ ಅಥವಾ ರಾತ್ರಿಯಲ್ಲಿ ಆಗಿದೆಯೋ ಎಂಬುದನ್ನು ತಿಳಿಯಲು ಆ ವ್ಯಕ್ತಿಯ ಕರ್ಣಾವಲೋಕನೆಯಿಂದ ಸ್ಥೂಲವಾಗಿ ತಿಳಿದುಕೊಳ್ಳಬಹುದು.

೧. ಯಾರ ಕಿವಿಯ ತುದಿಯು ಗಲ್ಲಕ್ಕೆ ಅಂಟಿಕೊಂಡಿರುತ್ತದೆಯೋ ಅಂಥ ವ್ಯಕ್ತಿಗಳ ಜನನ ಹೆಚ್ಚಾಗಿ ರಾತ್ರಿಯಾಗಿರುತ್ತದೆ.

೨. ಕಿವಿಯ ತುದಿಯು ಗಲ್ಲಕ್ಕೆ ಅಂಟಿಕೊಳ್ಳದಿದ್ದಲ್ಲಿ ಅಂಥವರು ಹಗಲಿನಲ್ಲಿ ಜನಿಸಿರಬಹುದು ಎಂದು ತಿಳಿದುಕೊಳ್ಳಬಹುದು.

### ಗಲ್ಲಗಳ ವಳಲಿಂದ ಮಂಗಳನ ರಾಶಿಯನ್ನು ಕಂಡುಹಿಡಿಯುವ ಕ್ರಮಗಳು

ಯಾರೊಬ್ಬ ವ್ಯಕ್ತಿಯ ಗಲ್ಲಗಳ ಈಕ್ಷಣೆಯಿಂದ ಅವರ ಜಾತಕದಲ್ಲಿದ್ದ ಮಂಗಳನ ರಾಶಿಯನ್ನು ಕಂಡುಹಿಡಿಯಲು ಬರುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ :—

೧. ಮಂಗಳನು ಮೇಷ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಗುಲಾಬಿ ಬಣ್ಣದಂತಿದ್ದು ಉಬ್ಬಿದ ಹಾಗೂ ಅಗಲವಾಗಿಯೂ ಇರುತ್ತವೆ.

೨. ಮಂಗಳನು ವೃಷಭ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಒಳಗೆ ಹೋಗಿರುತ್ತವೆ.

೩. ಮಂಗಳನು ಮಿಥುನ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಕಿಂಚಿತ್ ಉಬ್ಬಿರುತ್ತವೆ.

೪. ಮಂಗಳನು ಕರ್ಕ ರಾಶಿಯಲ್ಲಿದ್ದ ವ್ಯಕ್ತಿಯು ನಕ್ಕಾಗ ಗಲ್ಲಕ್ಕೆ ತೂತುಬೀಳುತ್ತವೆ.

೫. ಮಂಗಳನು ಸಿಂಹರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ತುಂಬಿರು

೬. ಮಂಗಳನು ಕನ್ಯಾ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಹಳದೀ ವರ್ಣದವಿದ್ದು ಕೂತಿರುತ್ತವೆ.

೭. ಮಂಗಳನು ತುಲಾ ರಾಶಿಯಲ್ಲಿದ್ದ ಜಾತಕನ ಗಲ್ಲಗಳು ಪ್ರಸರಿಸಿ ದಂತಿರುತ್ತವೆ.

೮. ಮಂಗಳನು ವೃಶ್ಚಿಕ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಕೆಂಪು ಹಾಗೂ ಉಬ್ಬಿದವಿರುತ್ತವೆ.

೯. ಮಂಗಳನು ಧನು ರಾಶಿಯಲ್ಲಿದ್ದ ಜಾತಕನ ಗಲ್ಲಗಳು ಕೆಂಪು ಹಾಗೂ ಉಬ್ಬಿದವಿರುತ್ತವೆ.

೧೦. ಮಂಗಳನು ಮಕರ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಚಪ್ಪಟೆ ಹಾಗೂ ಕರ್ರಗಿರುತ್ತವೆ.

೧೧. ಮಂಗಳನು ಕುಂಭ ರಾಶಿಯಲ್ಲಿದ್ದ ಜಾತಕನ ಗಲ್ಲಗಳು ಸಾಧಾರಣ ವಾಗಿರುತ್ತವೆ.

೧೨. ಮಂಗಳನು ಮೀನ ರಾಶಿಯಲ್ಲಿದ್ದ ವ್ಯಕ್ತಿಯ ಗಲ್ಲಗಳು ಕಪ್ಪು ವರ್ಣದವಿದ್ದು ಪ್ರಸರಿಸಿದ ಹಾಗೂ ಉಬ್ಬಿದವಿರುತ್ತವೆ.

## ಗದ್ದ ಹಾಗೂ ಕೆಳತುಟಿಯ ಮೇಲಿಂದ ಶನಿಯ ರಾಶಿಯನ್ನು ಕಂಡುಹಿಡಿಯುವ ಕ್ರಮ

ಯಾವೊಬ್ಬ ವ್ಯಕ್ತಿಯ ಕೇವಲ ಕೆಳತುಟಿ ಹಾಗೂ ಗದ್ದದ ಈಕ್ಷಣೆಯಿಂದ ಆ ವ್ಯಕ್ತಿಯ ಜಾತಕದಲ್ಲಿ ಶನಿಯು ಯಾವ ರಾಶಿಯಲ್ಲಿರುವನು ಎಂಬುದು ತಿಳಿಯುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ :—

೧. ಶನಿಯು ಮೇಷ ರಾಶಿಯಲ್ಲಿದ್ದ ವ್ಯಕ್ತಿಯ ಹನುಭಾಗವು ಅಗಲ ವಿದ್ದು ನಡುವೆ ತಗ್ಗು ಇರುತ್ತದೆ ಮತ್ತು ಕೆಳತುಟಿ ಹಾಗೂ ಗದ್ದ (ಹನು) ಬಣ್ಣ ಕರ್ರಗಿರುತ್ತದೆ.

೨. ಶನಿಯು ವೃಷಭ ರಾಶಿಯಲ್ಲಿದ್ದ ವ್ಯಕ್ತಿಯ ಹನುಭಾಗವು ಅಗಲ ವಿದ್ದು ಕೆಳತುಟಿ ಹಾಗೂ ಹನುವಿನ ಭಾಗವು ಬೆಳ್ಳಗಿರುತ್ತದೆ.

೩. ಶನಿಯು ಮಿಥುನ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ಗೌರ

ವರ್ಣ ಹಾಗೂ ದಪ್ಪವಿರುತ್ತದೆ ಮತ್ತು ಹನುಭಾಗವು ಬೆಳ್ಳಗೆ ಹಾಗೂ ತಗ್ಗಾಗಿರುತ್ತದೆ.

೪. ಶನಿಯು ಕರ್ಕ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ಚಿಕ್ಕದೂ ಬೆಳ್ಳಗೂ ಇರುತ್ತದೆ. ಹನುಭಾಗವು ಉದ್ದ ಹಾಗೂ ಕಪ್ಪಗಿರುತ್ತತೆ.

೫. ಶನಿಯು ಸಿಂಹ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ದಪ್ಪ ಹಾಗೂ ಕಪ್ಪಗಿದ್ದು ಹನುಭಾಗ ಅಗಲವಿರುತ್ತದೆ.

೬. ಶನಿಯು ಕನ್ಯಾ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ದಪ್ಪ ಹಾಗೂ ಗೌರವರ್ಣದ್ದಿರುತ್ತದೆ. ಹನುಭಾಗ ಅಗಲವಿದ್ದು ಉದ್ದಕ್ಕೆ ಕಡಿಮೆ ಇರುತ್ತದೆ.

೭. ಶನಿಯು ತುಲಾ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ತೆಳ್ಳಗೆ ಹಾಗೂ ಗೌರವರ್ಣದಿನ್ದು ಹನುಭಾಗವು ಅಗಲ ಮತ್ತು ಮುಂದೆ ಬಂದಂತಿದ್ದು ಗೌರವರ್ಣದ್ದಿರುತ್ತದೆ.

೮. ಶನಿಯು ವೃಶ್ಚಿಕ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ತೆಳ್ಳಗೆ ನಸುಗೆಂಪು ಬಣ್ಣದ್ದಿದ್ದು ಹನುಭಾಗ ಅಗಲ ಹೆಚ್ಚಿದ್ದು ಉದ್ದಕ್ಕೆ ಕಡಿಮೆ ಇರುತ್ತದೆ.

೯. ಶನಿಯು ಧನು ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ಬಣ್ಣ ಕಪ್ಪಗಿರುತ್ತದೆ ಹಾಗೂ ಹನುಭಾಗ ಉದ್ದ ಹಾಗೂ ಮುಂದೆ ಬಂದಂತಿರುತ್ತದೆ

೧೦. ಶನಿಯು ಮಕರ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿಯು ಕೆಂಪು ಬಣ್ಣದ್ದಿದ್ದು ಹನುಭಾಗ ಹಾಗೂ ಕೆಳತುಟಿಯ ಮಧ್ಯಭಾಗದಲ್ಲಿ ತಗ್ಗು ಪ್ರದೇಶ (ಹಳ್ಳ) ದಂತಿರುತ್ತದೆ.

೧೧. ಶನಿಯು ಕುಂಭ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿ ತೆಳ್ಳಗೆ ಮತ್ತು ಬೆಳ್ಳಗಿದ್ದು ಹನುಭಾಗವು ಉದ್ದಕ್ಕಿಂತ ಅಗಲ ಹೆಚ್ಚಿರುತ್ತದೆ.

೧೨. ಶನಿಯು ಮೀನ ರಾಶಿಯಲ್ಲಿದ್ದ ವ್ಯಕ್ತಿಯ ಕೆಳತುಟಿ ಹಾಗೂ ಹನುಭಾಗದ ಮಧ್ಯದಲ್ಲಿ ತಗ್ಗು ಪ್ರದೇಶ (ಹಳ್ಳ)ದಂತೆ ಇರುತ್ತದೆ. ಹಾಗೂ ಕೆಳತುಟಿ ದಪ್ಪವಾಗಿರುತ್ತದೆ ಹಾಗೂ ಹನುಭಾಗ ಉದ್ದಕ್ಕಿಂತ ಅಗಲ ಕಡಿಮೆ

## ವ್ಯಕ್ತಿತ್ವದರ್ಶನ (Personality)

ವ್ಯಕ್ತಿತ್ವದರ್ಶನ (Personality) ದಿಂದ ಸಹ ಯಾರೊಬ್ಬ ಜಾತಕನ ಶರೀರ ಪ್ರಕೃತಿ, ಸ್ವಭಾವ, ಶೀಲ, ಮನಸ್ಸು, ಸೌಂದರ್ಯ, ಶರೀರ ಕಾಂತಿ, ಬಣ್ಣ ಮೊದಲಾದ ವಿಷಯಗಳನ್ನು ಜಾತಕದ ತನುಸ್ಥಾನದಿಂದ ಎಂದರೆ ಲಗ್ನದ ಮೇಲಿಂದ ನಿರ್ಣಯಿಸಲು ಬರುತ್ತದೆ.

ಈ ಮೇಲ್ಕಂಡ ವಿಷಯಗಳನ್ನು ತಿಳಿಯಬೇಕಾದರೆ ನಾವು ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕಾಗುತ್ತದೆ.

೧. ಲಗ್ನದ ವೈಶಿಷ್ಟ್ಯ ಹಾಗೂ ಲಗ್ನೇಶನ ಬಲಾಬಲ.

೨. ಲಗ್ನಸ್ಥಾನದಲ್ಲಿರುವ ಗ್ರಹಗಳ ಬಲಾಬಲ.

ಮೊದಲನೆಯದಾಗಿ ವಾಯು ಹಾಗೂ ಪೃಥ್ವಿ ತತ್ವದ ರಾಶಿಗಳ ಲಗ್ನಗಳು ಸೌಂದರ್ಯ, ಗೌರವರ್ಣ, ಕಾಂತಿಯುಕ್ತ ಮುಖಗಳಿಗೆ ಪೂರಕ ವಾಗಿರುತ್ತವೆ.

ಎರಡನೆಯದಾಗಿ ಜಲಚರ ಹಾಗೂ ಅಗ್ನಿತತ್ವದ ರಾಶಿಗಳ ಲಗ್ನದ ವ್ಯಕ್ತಿಗಳು ಸದ್ಧಾಮುದ್ದ, ಸ್ಥೂಲದೇಹ ಕುರೂಪಿತನವನ್ನು ತೋರಿಸುತ್ತಿವೆ

### ಗ್ರಹಗಳ ಬಲಾಬಲ

೧. ಚಂದ್ರ-ಶುಕ್ರರು ಲಗ್ನದಲ್ಲಿದ್ದರೆ ಸೌಂದರ್ಯಪೋಷಣರಿರುತ್ತಾರೆ.

೨. ಗುರು-ರವಿಯರು ಲಗ್ನದಲ್ಲಿದ್ದರೆ ಮಧ್ಯಮ ಸೌಂದರ್ಯಕಾಂಕ್ಷರಿರುತ್ತಾರೆ.

೩. ಶನಿ, ಬುಧ, ಮಂಗಳ, ರಾಹು-ಕೇತು ಈ ಗ್ರಹಗಳು ಲಗ್ನದಲ್ಲಿದ್ದರೆ ಸೌಂದರ್ಯ ಹಾಗೂ ಕಾಂತಿಗೆ ಹಾನಿಕಾರಕವು ಅರ್ಥಾತ್ ಕುರೂಪತೆಯನ್ನು ಪ್ರದರ್ಶಿಸುತ್ತವೆ.

ಇನ್ನು ಇವೇ ಗ್ರಹಗಳು ಭಿನ್ನ ಭಿನ್ನ ರಾಶಿಯಿಂದ ಲಗ್ನದಲ್ಲಿದ್ದರೆ ಬೇರೆ ಬೇರೆ ಪ್ರಕಾರದ ಸ್ವಭಾವ ಸೌಂದರ್ಯ ವರ್ಣಾದಿಗಳನ್ನು ದರ್ಶಿಸುತ್ತವೆ. ಅವುಗಳ ವಿವೇಚನೆಯನ್ನು ಮುಂದಿನ ಪುಟದಲ್ಲಿ ಕೊಡಲಾಗಿದೆ:—

## ೧. ಮೇಷಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ಮೇಷ ಲಗ್ನವಿದ್ದು ಲಗ್ನದಲ್ಲಿ ರವಿ ಇದ್ದರೆ ಸಾದಗಪ್ಪು ವರ್ಣ, ಗಂಭೀರ ಮುಖ, ದೊಡ್ಡ ಕಣ್ಣುಗಳು ಇರುತ್ತವೆ.

ಮೇಷ ಲಗ್ನವಿದ್ದು ಚಂದ್ರನು ಲಗ್ನದಲ್ಲಿದ್ದರೆ ಗೌರವರ್ಣ, ಸೌಮ್ಯ ಮುದ್ರಾ, ಆಕರ್ಷಕ ಕಣ್ಣು ಹಾಗೂ ಮುಖದ ಮೇಲೆ ಕೆಂಪು ಛಾಯೆ ಇರುತ್ತದೆ.

ಮೇಷ ಲಗ್ನವಿದ್ದು ಮಂಗಳನು ಲಗ್ನದಲ್ಲಿದ್ದರೆ ಕೆಂಪು ವರ್ಣ, ಕ್ರೂರ ಮುದ್ರಾ, ಭಯಾನಕ ದೃಷ್ಟಿ ಇರುತ್ತದೆ.

ಮೇಷ ಲಗ್ನವಿದ್ದು ಲಗ್ನದಲ್ಲಿ ಬುಧನಿದ್ದರೆ ಕಪ್ಪಗಾದ ಮುಖ, ನಗು ಮೋರೆ ಹಾಗೂ ಮುಖದ ಮೇಲೆ ಹಾಗೂ ಹಣೆಯ ಮೇಲೆ ಹಸಿರು ಬಣ್ಣದ ಸಿರಗಳು ಉಬ್ಬಿರುತ್ತವೆ.

ಮೇಷ ಲಗ್ನವಿದ್ದು ಗುರು ಲಗ್ನದಲ್ಲಿದ್ದರೆ ಗೌರವರ್ಣವಿಲ್ಲದಿದ್ದರೂ ಕಾಂತಿಯುಕ್ತ ಮುಖ, ವರ್ಚಸ್ವೀ ಕಣ್ಣುಗಳು, ಉದ್ದವಾದ ಹಣೆ ನಾರಸಿಂಹನ ಹಾಗೆ ಪಸರಿಸಿದ ಬಾಯಿ.

ಮೇಷ ಲಗ್ನವಿದ್ದು ಲಗ್ನದಲ್ಲಿ ಶುಕ್ರನಿದ್ದರೆ ಗೌರವರ್ಣ, ಕೆಂಪುವರ್ಣ ಇದ್ದು ಇವರ ಸ್ವಭಾವ ವಾಚಾಳಿ, ವಿನೋದಿ, ವಿಲಾಸಿ ಇರುತ್ತದೆ.

ಮೇಷ ಲಗ್ನವಿದ್ದ ಲಗ್ನದಲ್ಲಿ ಶನಿ ಇದ್ದರೆ ಕಪ್ಪು ವರ್ಣ, ಒಡಕು ಬಾಯಿ ಕಡಿಮೆ ಮಾತು.

## ೨. ವೃಷಭ ಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ವೃಷಭ ಲಗ್ನವಿದ್ದು ಲಗ್ನದಲ್ಲಿ ರವಿ ಇದ್ದರೆ ಕಪ್ಪು ವರ್ಣ, ಕಡಿಮೆ ಎತ್ತರ, ಉದಾಸೀನ ಮುದ್ರೆ, ಉಬ್ಬಿದ ಕುತ್ತಿಗೆ, ವಿರಳವಾದ ದಂತಗಳು ಇರುತ್ತವೆ.

ವೃಷಭ ಲಗ್ನದಲ್ಲಿ ಚಂದ್ರನಿದ್ದರೆ ಗೌರವರ್ಣ, ಎತ್ತರವಾದ ಹೆಗಲು ಸ್ಮಿತವದನ ( ಹಸನ್ಮುಖಿ ) ತೀಕ್ಷ್ಣದೃಷ್ಟಿ, ದಂತಪಂಕ್ತಿಸುಂದರ, ಉಬ್ಬಿದ ಗಲ್ಲಗಳು.

ವೃಷಭಲಗ್ನದ ಲಗ್ನದಲ್ಲಿ ಮಂಗಳನಿದ್ದರೆ ಸಾಧಾರಣ ಗೌರವರ್ಣ, ಮುಖದ ಮೇಲೆ ಕೆಂಪು ಛಾಯೆ, ಗರ್ವಿಷ್ಠ ಮುದ್ರೆ, ದುರಭಿಮಾನಿ, ಹಟವಾದಿ ಸ್ವಭಾವ.

ವೃಷಭಲಗ್ನದ ಲಗ್ನದಲ್ಲಿ ಬುಧನಿದ್ದರೆ ಹಸನ್ಮುಖಿ. ಮೋಹಕದೃಷ್ಟಿ, ಸಾದುಗಪ್ಪು, ಮುಖದ ಹಸಿರು ಛಾಯೆ.

ವೃಷಭಲಗ್ನದ ಲಗ್ನದಲ್ಲಿ ಗುರು ಇದ್ದರೆ ಹಳದೀಬಣ್ಣದ ಮುಖ, ಉದ್ದವಾದ ಸೀಳಾದ ಹೆಗಲು, ನೀರ್ಗಟ್ಟಿನ ಕಣ್ಣು.

ವೃಷಭಲಗ್ನದ ಲಗ್ನದಲ್ಲಿ ಶುಕ್ರನಿದ್ದರೆ ಸುಂದರವದನ (ಮುಖ), ಕಾಂತಿಯುಕ್ತ ಕಣ್ಣು, ನಾಟು ನೋಟ.

ವೃಷಭಲಗ್ನವಿದ್ದು ಲಗ್ನದಲ್ಲಿ ಶನಿ ಇದ್ದರೆ ತಾಮಸೀ ಸ್ವಭಾವ ಮಧ್ಯಮ ಎತ್ತರ, ಕಪ್ಪುವರ್ಣ.

೩. ಮಿಥುನಲಗ್ನದ ಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ಮಿಥುನಲಗ್ನದ ಲಗ್ನದಲ್ಲಿ ರವಿ ಇದ್ದರೆ ಕಣ್ಣಿನ ಕೆಳಭಾಗವು ಉಬ್ಬಿರುತ್ತದೆ. ಕಪ್ಪುಬಣ್ಣವಿದ್ದರೂ ಕಾಂತಿಯುಕ್ತವಾಗಿರುತ್ತದೆ.

ಮಿಥುನಲಗ್ನದ ಲಗ್ನದಲ್ಲಿ ಚಂದ್ರನಿದ್ದರೆ ಗೌರವರ್ಣ ಆಕರ್ಷಕ ಕಣ್ಣು, ತೆಳ್ಳನ್ನ ಶರೀರ, ಎತ್ತರ ದೇಹ ಆದರೆ ಮುಖ ಇಲ್ಲವೆ ಹಲ್ಲುಗಳು ಮುಂದೆ ಬಂದಿರುತ್ತವೆ.

ಮಿಥುನಲಗ್ನದ ಲಗ್ನದಲ್ಲಿ ಮಂಗಳನಿದ್ದರೆ ಕೆಂಪುವರ್ಣ, ಕೋಪಿಷ್ಠ ಮುಖವಿರುತ್ತದೆ.

ಮಿಥುನಲಗ್ನದ ಲಗ್ನದಲ್ಲಿ ಬುಧನಿದ್ದರೆ ಗೌರವರ್ಣ, ಮಾಟಾದ ದೇಹ. ಹಸನ್ಮುಖಿಗಳಿರುತ್ತಾರೆ.

ಮಿಥುನಲಗ್ನದ ಲಗ್ನದಲ್ಲಿ ಗುರು ಇದ್ದರೆ ಗಂಭೀರಮುದ್ರೆ, ಗೌರವರ್ಣ, ಮೇಧಾವಿ, ವರ್ಚಸ್ವೀಪ್ರಭಾವಿ ವ್ಯಕ್ತಿತ್ವ.

ಮಿಥುನಲಗ್ನದ ಲಗ್ನದಲ್ಲಿ ಶುಕ್ರನಿದ್ದರೆ ಗೌರವರ್ಣ, ಉದ್ದವಾದ ಮೂಗು, ಆಕರ್ಷಕ ಕಣ್ಣು, ವಿನೋದ ಸ್ವಭಾವ, ಬಡಕಲು ದೇಹ.

ಮಿಥುನಲಗ್ನದ ಲಗ್ನದಲ್ಲಿ ಶನಿ ಇದ್ದರೆ ಕಪ್ಪುವರ್ಣ, ಭಯಾನಕ ದೃಷ್ಟಿ ಇರುತ್ತದೆ.

### ೪. ಕರ್ಕಲಗ್ನದ ಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ಕರ್ಕಲಗ್ನದ ಲಗ್ನದಲ್ಲಿ ರವಿ ಇದ್ದರೆ ಕಪ್ಪುವರ್ಣ, ಸದೃಢದೇಹ ಚೌಕಾದ ಮುಖ ಇರುತ್ತದೆ.

ಕರ್ಕಲಗ್ನದ ಲಗ್ನದಲ್ಲಿ ಚಂದ್ರನಿದ್ದರೆ ಗೌರವರ್ಣ, ಆಕರ್ಷಕ ಕಣ್ಣು, ವಿಸ್ತಾರವಾದ ಎದೆ, ನಡೆಯುವಾಗ ಹೇಟೆಗಾಲು.

ಕರ್ಕಲಗ್ನದ ಲಗ್ನದಲ್ಲಿ ಮಂಗಳನಿದ್ದರೆ ನಿಸ್ತೇಜಮುಖ, ವಿಕ್ಷಿಪ್ತ ಸ್ವಭಾವ ಹಾಗೂ ನಗುವಾಗ ಗಲ್ಲದಲ್ಲಿ ಗುಳಿ ಬೀಳುತ್ತದೆ.

ಕರ್ಕಲಗ್ನದ ಲಗ್ನದಲ್ಲಿ ಬುಧನಿದ್ದರೆ ಸಾದುಗಪ್ಪು, ಚಪ್ಪಟೆಮೂಗು, ಚುಚ್ಚು ಮಾತುಗಾರಿಕೆ.

ಕರ್ಕಲಗ್ನದ ಲಗ್ನದಲ್ಲಿ ಗುರು ಇದ್ದರೆ ಗೌರವರ್ಣ, ಗಂಭೀರಮುದ್ರೆ, ಆಕರ್ಷಕ ಕಣ್ಣು, ಪ್ರಭಾವೀ ವ್ಯಕ್ತಿತ್ವ.

ಕರ್ಕಲಗ್ನದ ಲಗ್ನದಲ್ಲಿ ಶುಕ್ರನಿದ್ದರೆ ನಿಸ್ತೇಜಮುಖ, ತೆಳ್ಳಗಾದ ದೇಹ.

ಕರ್ಕಲಗ್ನದ ಲಗ್ನದಲ್ಲಿ ಶನಿ ಇದ್ದರೆ ಕಪ್ಪುವರ್ಣ, ಹನುಭಾಗ ವಿಸ್ತಾರವಾಗಿರುತ್ತದೆ.

### ೫. ಸಿಂಹಲಗ್ನದ ಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ಸಿಂಹಲಗ್ನದ ಲಗ್ನದಲ್ಲಿ ರವಿಯಿದ್ದರೆ ದುಂಡಾದ ಮುಖ, ಕಮಲದಂತೆ ಸುಂದರವಾದ ಕಣ್ಣುಗಳು, ದಷ್ಟಪುಷ್ಟಕಾಯ, ಸ್ಥೂಲದೇಹ.

ಸಿಂಹಲಗ್ನದ ಲಗ್ನದಲ್ಲಿ ಚಂದ್ರನಿದ್ದರೆ ತಿಳಿಗೂದಲು ಬೆಳ್ಳಗೆ. ಐಶ್ವರ್ಯ ಭೋಗಿ.

ಸಿಂಹಲಗ್ನದ ಲಗ್ನದಲ್ಲಿ ಮಂಗಳನಿದ್ದರೆ ಉಷ್ಣಪ್ರಕೃತಿ, ಕೆಂಪುವರ್ಣ, ಶೀಘ್ರಕೋಪಿ. ಗಂಭೀರಮುದ್ರೆ, ಕ್ರೂರದೃಷ್ಟಿ

ಸಿಂಹಲಗ್ನದ ಲಗ್ನದಲ್ಲಿ ಬುಧನಿದ್ದರೆ ಕಪ್ಪುವರ್ಣ ಬಹುಜನರ ಪ್ರೀತಿ, ಹಸನ್ಮುಖಿ.

ಸಿಂಹಲಗ್ನದ ಲಗ್ನದಲ್ಲಿ ಗುರು ಇದ್ದರೆ ಪೀತಪ್ರಕೃತಿ, ಪ್ರಭಾವೀ ವ್ಯಕ್ತಿತ್ವ, ಮೇಧಾವಿ, ಸ್ಥೂಲದೇಹಿ.

ಸಿಂಹಲಗ್ನದ ಲಗ್ನದಲ್ಲಿ ಶುಕ್ರನಿದ್ದರೆ ಗೌರವರ್ಣ, ಕಾಂತಿಯುಕ್ತ ಮುಖ, ಸ್ಥೂಲಪ್ರಕೃತಿ

ಸಿಂಹಲಗ್ನದ ಲಗ್ನದಲ್ಲಿ ಶನಿ ಇದ್ದರೆ ಕಪುವರ್ಣ, ತಾಮಸೀ ಸ್ವಭಾವ.

೬. ಕನ್ಯಾಲಗ್ನದ ಲಗ್ನದಲ್ಲಿದ್ದ ಗ್ರಹಗಳ ಸ್ವಭಾವ

ಕನ್ಯಾಲಗ್ನದ ಲಗ್ನದಲ್ಲಿ ರವಿಯಿದ್ದರೆ ಸದಾರೋಗಪೀಡಿತ ಮೆತ್ತನ್ನ ಸ್ವಭಾವ.

ಕನ್ಯಾಲಗ್ನದ ಲಗ್ನದಲ್ಲಿ ಚಂದ್ರನಿದ್ದರೆ ಗೌರವರ್ಣ, ಕಾಂತಿಯುಕ್ತ ಮುಖ, ಅಂತಃಕರಣ, ಬಹುಮಿತ್ರ.

ಕನ್ಯಾಲಗ್ನದ ಲಗ್ನದಲ್ಲಿ ಮಂಗಳನಿದ್ದರೆ ಕೆಂಪುವರ್ಣ, ಮಧುರಭಾಷಿ, ಕಪಟಿ

ಕನ್ಯಾಲಗ್ನದ ಲಗ್ನದಲ್ಲಿ ಬುಧನಿದ್ದರೆ ಹಸನ್ಮುಖಿ, ವ್ಯವಹಾರತಜ್ಞ, ಸರಳ ಹಾಗೂ ಚಿಕ್ಕ ದಂತಪಂಕ್ತಿ.

ಕನ್ಯಾಲಗ್ನದ ಲಗ್ನದಲ್ಲಿ ಗುರು ಇದ್ದರೆ ಗಂಭೀರಮುಖ, ಚೌಕಮೊರೆ, ಮಿತಭಾಷಿ.

ಕನ್ಯಾಲಗ್ನದ ಲಗ್ನದಲ್ಲಿ ಶುಕ್ರನಿದ್ದರೆ ಪರಸ್ತ್ರೀ ಅಭಿಲಾಷಿ, ಗೌರವರ್ಣ ವಾಚಾಳ.

ಕನ್ಯಾಲಗ್ನದ ಲಗ್ನದಲ್ಲಿ ಶನಿ ಇದ್ದರೆ ಕಪ್ಪುವರ್ಣ, ಬಂಧುಸೌಖ್ಯ ವಿಹೀನ ಹಾಗೂ ಪಿತೃಸೌಖ್ಯ ಕಡಿಮೆ.

ವಿ. ಸೂ:— ಭಿನ್ನ ಭಿನ್ನ ಲಗ್ನದ ಲಗ್ನದಲ್ಲಿದ್ದ ಗ್ರಹಗಳ ದೈಹಿಕ, ಮಾನಸಿಕ ವ್ಯಕ್ತಿತ್ವದ ಬಗೆಗೆ ಮೇಷದಿಂದ ಕನ್ಯಾಲಗ್ನದ ವರೆಗೆ ಬರೆಯ ಲಾಗಿದೆ. ಇದರಂತೆಯೇ ಇತರ ಲಗ್ನಗಳನ್ನು ಪರಶೀಲಿಸಬೇಕು.

೫

## ಅನುಭವಿಕ ನಿಯಮಂಗಳು

ನಮ್ಮ ಅನೇಕ ವರುಷಗಳ ವ್ಯವಸಾಯದಿಂದ ಬಂದ ವೈಶಿಷ್ಟ್ಯಪೂರ್ಣಕ ಕೆಲ ಅನುಭವಗಳನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ. ಇದರಿಂದ ಲಗ್ನ ಹಾಗೂ ರಾಶಿಗಳನ್ನು ನಿರ್ಣಯಿಸಲು ಸಹಾಯಕರವಾಗಬಹುದಾಗಿದೆ.

೧. ಕುಂಭಲಗ್ನದಲ್ಲಿ ಜನಿಸಿದವರ ಹಣೆಯು ಅತಿ ಎತ್ತರವಿರುತ್ತದೆ ಇಲ್ಲವೆ ಅವರ ತಲೆಯ ಮುಂಭಾಗದಲ್ಲಿ ಕೂದಲಿರುವುದಿಲ್ಲ. ಅಥವಾ ಮುಂಭಾಗದ ಕೂದಲು ವಿರಳವಾಗಿರುತ್ತವೆ. ಅಥವಾ ಹಣೆಯು ಬಹಳ ಚಿಕ್ಕದಿರುತ್ತದೆ.

೨ ಸಿಂಹಲಗ್ನವಿದ್ದರೆ ದುಂಡನ್ನ ಮುಖವೂ, ಕರ್ಕಲಗ್ನವಿದ್ದರೆ ಚೌಕುಮೋರೆಯೂ ಇರುತ್ತದೆ.

೩. ಧನುಲಗ್ನವಿದ್ದರೆ ಸ್ಥೂಲದೇಹವೂ, ಅಜಾನುಬಾಹು ಉಳ್ಳವರಿರುತ್ತಾರೆ.

೪. ವೃಶ್ಚಿಕಲಗ್ನವಿದ್ದರೆ ಕೋಳಿಯ ಮೊಟ್ಟೆಯಾಕಾರದಂತೆ ಮುಖ ಉಳ್ಳವರಿರುವರು.

೫. ಮಕರಲಗ್ನವಿದ್ದರೆ ಸ್ಥೂಲದೇಹಿಗಳಾಗಿಯೂ, ಮುಖವು ದೊಡ್ಡದೂ, ವಿಸ್ತಾರವಾದ ವದನ ಉಳ್ಳವರಿರುವರು.

೬. ಮೇಷಲಗ್ನವಿದ್ದರೆ ಕುಳ್ಳರೂ, ಮೀನಲಗ್ನವಿದ್ದರೆ ಎತ್ತರ ನಿಲುವುಳ್ಳವರಿರುತ್ತಾರೆ.

೭. ವೃಶ್ಚಿಕಲಗ್ನವಿದ್ದ ಜಾತಕನ ಕೂದಲುಗಳು ಒರಟು ಹಾಗೂ ತಲೆಯು ಉದ್ದವಿರುತ್ತದೆ.

೮. ವಸಂತಋತುವಿನಲ್ಲಿ ಜನನವಾದ ವ್ಯಕ್ತಿಯ ಬೆವರಿಗೆ ಹೂವಿನಂಥ ವಾಸನೆ ಇರುತ್ತದೆ.

೯. ಮೀನಲಗ್ನದಲ್ಲಿ ಜನಿಸಿದ ವ್ಯಕ್ತಿಯು ಮಾತನಾಡುವ ಮೊದಲೇ ನಗುವನು ಹಾಗೂ ಆ ಜಾತಕನ ತೊಡೆಯಮೇಲೆ ಕೂದಲು ಬಹಳ ಇರುತ್ತದೆ.

೨೦. ಕರ್ಕ, ವೃಶ್ಚಿಕ, ಮೀನ ಈ ಲಗ್ನದಲ್ಲಿ ಜನಿಸಿದ ಜಾತಕನ ಕಣ್ಣುಗಳು ಕಪ್ಪಾಗಿರುತ್ತವೆ.

೨೧. ವೃಶ್ಚಿಕ ಲಗ್ನದಲ್ಲಿ ಜನಿಸಿದ ವ್ಯಕ್ತಿಯ ದೃಷ್ಟಿಯಲ್ಲಿ ಕ್ರೂರತ್ವ ಎದ್ದು ಕಾಣಿಸುತ್ತದೆ. ಹಾಗೂ ಇವರು ಕಣ್ಣು ತೆರೆದು ದಿಟ್ಟಿಸಿನೋಡುವರು.

ಪಿ. ಸೂ — ಓದುಗರು ಮೇಲೆ ಕಾಣಿಸಿದ ಅನುಭವಿಕ ನಿಯಮಗಳನ್ನು ಪ್ರಯೋಗಮಾಡಿ ಸತ್ಯಶೋಧನೆಗಾಗಿ ನಮಗೆ ತಿಳಿಸಬಹುದು.

**ರವಿಯು ಮೇಲಿಂದ ಲಗ್ನವನ್ನು ನಿರ್ಧರಿಸುವ ಕ್ರಮ**

ಯಾವುದೇ ವರ್ಷದ, ಯಾವುದೇ ತಿಂಗಳ, ಯಾವುದೇ ದಿನದಲ್ಲಿ ಜನ್ಮಿಸಿದ ವ್ಯಕ್ತಿಯ ಜಾತಕವನ್ನು ನಿರ್ಧರಿಸುವಾಗ ಈ ಕೆಳಗೆ ಕಾಣಿಸಿದ ಸೂತ್ರಗಳನ್ನು ಅನುಸರಿಸುವದರಿಂದ ಅನೇಕ ಜಾತಕಗಳಲ್ಲಿ ನಿರ್ದಿಷ್ಟ ಜಾತಕವನ್ನು ನಿರ್ಧರಿಸಲು ಅನುಕೂಲವಾಗುತ್ತದೆ.

೧. ಸೂರ್ಯೋದಯಕ್ಕೆ ಜನನವಾದ ವ್ಯಕ್ತಿಯ ಜಾತಕದಲ್ಲಿ ಸೂರ್ಯನು ಲಗ್ನದಲ್ಲಿರುತ್ತಾನೆ.

೨. ಸೂರ್ಯಾಸ್ತಕ್ಕೆ ಜನನವಾದ ವ್ಯಕ್ತಿಯ ಜಾತಕದಲ್ಲಿ ಸೂರ್ಯನು ಸಪ್ತಮಸ್ಥಾನದಲ್ಲಿರುತ್ತಾನೆ.

೩. ಪೂರ್ವಾಹ್ನ ಎಂದರೆ ೧೨ ರಿಂದ ೨ ಗಂಟೆ ( ಸ್ಟ್ಯಾ. ಟಾ. ) ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ದಶಮದಲ್ಲಿರುತ್ತಾನೆ.

೪. ರಾತ್ರಿ ೧೨ ರಿಂದ ೨ ಗಂಟೆಯ (ಸ್ಟ್ಯಾ. ಟಾ.) ವರೆಗೆ ಜನಿಸಿದ ವ್ಯಕ್ತಿಯ ಜಾತಕದಲ್ಲಿ ರವಿಯು ಚತುರ್ಥ ಸ್ಥಾನದಲ್ಲಿರುತ್ತಾನೆ.

೫. ಪ್ರಾತಃಕಾಲದಲ್ಲಿ (ನಸುಕಿನಲ್ಲಿ) ಎಂದರೆ ೪ ರಿಂದ ೬ ಗಂಟೆಯ ವರೆಗೆ ಜನಿಸಿದ ವ್ಯಕ್ತಿಯ ಜಾತಕದಲ್ಲಿ ರವಿಯು ದ್ವಿತೀಯ ಸ್ಥಾನದಲ್ಲಿರುತ್ತಾನೆ.

೬. ಮುಂಜಾನೆ ೭ ರಿಂದ ೯ ಗಂಟೆಯ ವರೆಗೆ ಜನಿಸಿದ ವ್ಯಕ್ತಿಯ ಜಾತಕದಲ್ಲಿ ರವಿಯು ದ್ವಾದಶಸ್ಥಾನದಲ್ಲಿರುತ್ತಾನೆ.

೭. ಮುಂಜಾನೆ ೧೦ ರಿಂದ ೧೨ರ ವರೆಗೆ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ಏಕಾದಶ ಸ್ಥಾನದಲ್ಲಿರುತ್ತಾನೆ.

೮. ಮಧ್ಯರಾತ್ರಿ ೨ ರಿಂದ ಬೆಳಗಿನ ೪ ಗಂಟೆಯ ವರೆಗೆ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ತೃತೀಯ ಸ್ಥಾನದಲ್ಲಿರುತ್ತಾನೆ.

೯. ಅಪರಾಹ್ನ ೨ ರಿಂದ ಸಾಯಂಕಾಲದ ೪ ಗಂಟೆಯ ವರೆಗೆ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ನವಮಸ್ಥಾನದಲ್ಲಿರುತ್ತಾನೆ.

೧೦. ರಾತ್ರಿ ೧೦ ರಿಂದ ೧೨ ರ ವರೆಗೆ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ಪಂಚಮಸ್ಥಾನದಲ್ಲಿರುತ್ತಾನೆ.

೧೧. ಸಾಯಂಕಾಲ ೪ ರಿಂದ ಸೂರ್ಯಾಸ್ತದ ಪೂರ್ವದಲ್ಲಿ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ಅಷ್ಟಮಿಸ್ಥಾನದಲ್ಲಿರುತ್ತಾನೆ.

೧೨. ಸೂರ್ಯಾಸ್ತದಿಂದ ರಾತ್ರಿ ೮ ರ ವರೆಗೆ ಜನಿಸಿದ ವ್ಯಕ್ತಿಯು ಜಾತಕದಲ್ಲಿ ರವಿಯು ಷಷ್ಠಸ್ಥಾನದಲ್ಲಿರುತ್ತಾನೆ.

ಹೀಗೆ ಜನನ ವೇಳೆಯಿಂದ ರವಿಯ ಸ್ಥಾನವನ್ನು ಸ್ಥೂಲವಾಗಿ ನಿರ್ಧರಿಸಬಹುದಾಗಿದೆ. ಇದರಿಂದ ಜಾತಕವನ್ನು ನಿರ್ಧರಿಸಲು, ಖಚಿತಪಡಿಸಲು ಸಹಾಯವಾಗುತ್ತದೆ.

### ಜೀವನದ ಘಟನೆಗಳ ಮೇಲಿಂದ ರಾಶಿಗಳನ್ನು ನಿರ್ಧರಿಸುವ ಕ್ರಮ

ಲಗ್ನ ಹಾಗೂ ರಾಶಿಗಳ ಸಂದಿಗ್ಧದಲ್ಲಿ ನಿಶ್ಚಿತವಾದ ರಾಶಿಲಗ್ನಗಳನ್ನು ಖಚಿತಪಡಿಸಿಕೊಳ್ಳಲು ಜೀವನದಲ್ಲಿಯ ಮಹತ್ವದ ಘಟನೆಗಳ ಮೇಲಿಂದ ನಿರ್ಧರಿಸಲಾಗುತ್ತದೆ. ಇವುಗಳ ವಿವೇಚನೆಯನ್ನು ಈ ಕೆಳಗಿನಂತೆ ಕೊಡಲಾಗಿದೆ—

ಯಾರೊಬ್ಬವ್ಯಕ್ತಿಯು ಜೀವನದಲ್ಲಿ ಸಾಮಾನ್ಯವಾಗಿ ಎಂಟು ಸಂಗತಿಗಳು ಮಹತ್ವದ್ದಿರುತ್ತವೆ—

೧. ಜಾತಕನ ಆರೋಗ್ಯ.

೨. ಶಿಕ್ಷಣ ಹಾಗೂ ಬುದ್ಧಿಮತ್ತೆ (ವಿದ್ಯಾ-ಬುದ್ಧಿ).

೩. ಉದ್ಯೋಗ,
೪. ಮಾತಾ–ಪಿತರ ಸೌಖ್ಯ,
೫. ಪಿತ್ರಾರ್ಜಿತ ಆಸ್ತಿಯ ಸೌಖ್ಯ,
೬. ವಿವಾಹ ಹಾಗೂ ವೈವಾಹಿಕ ಜೀವನ,
೭. ಸಂತತಿ ಹಾಗೂ ಸಂತಾನಸೌಖ್ಯ,
೮. ಬಂಧು–ಬಳಗದವರ ಸೌಖ್ಯ.

ಈ ಮೊದಲಾದ ಸಂಗತಿಗಳು ಜಾತಕನ ಯಾವ ಲಗ್ನರಾಶಿಗಳಿಗೆ ಪೂರಕವಾಗಿವೆ ಎಂಬುದನ್ನು ಪರಿಶೀಲಿಸಬೇಕು. ಇವುಗಳ ಕೊರತೆ ಹಾಗೂ ಪ್ರತಿಕೂಲ ಸಂಗತಿಗಳು ಉಂಟಾಗಿದ್ದ ಕಾಲವನ್ನೂ ಕೂಡ ಗಣನೆಗೆ ತೆಗೆದು ಕೊಳ್ಳಬೇಕು ಈ ಎಲ್ಲ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕೆಂಬುದನ್ನು ನೋಡುವಾ.

## ೧. ಆರೋಗ್ಯ

ಯಾರೊಬ್ಬ ವ್ಯಕ್ತಿಯ ಆರೋಗ್ಯ ಉತ್ತಮವಿರಲು ನಾವು ಸ್ಥೂಲ ವಾಗಿ '೫' ಸಂಗತಿಗಳನ್ನು ನೋಡಬೇಕು.

೧. ಲಗ್ನೇಶ ಹಾಗೂ ಲಗ್ನದಲ್ಲಿರುವ ಗ್ರಹ ಬಲಾಢ್ಯವಿರಬೇಕು
೨. ಷಷ್ಠೇಶ ಹಾಗೂ ಷಷ್ಠಸ್ಥಾನದಲ್ಲಿರುವ ಗ್ರಹಗಳ ಬಲಾಬಲ
೩. ಅಷ್ಟಮ ಸ್ಥಾನದಲ್ಲಿರುವ ಗ್ರಹ ಹಾಗೂ ಅಷ್ಟಮೇಶನ ಬಲಾಬಲ
೪. ಸೂರ್ಯ–ಚಂದ್ರರ ಬಲಾಬಲ
೫. ಗೋಚರೀ ಗ್ರಹಗಳ ಬಲಾಬಲ

ಈ ಐದು ಸಂಗತಿಗಳ ಮೇಲಿಂದ ಯಾರೊಬ್ಬ ವ್ಯಕ್ತಿಯ ಆರೋಗ್ಯದ ವಿಷಯವಾಗಿ ನಿರ್ಣಯಿಸಲು ಬರುತ್ತದೆ.

## ೨. ಮಾತಾ–ಪಿತೃಗಳ ಸೌಖ್ಯ

ವ್ಯಕ್ತಿಯ ಮಾತಾ ಪಿತರ ಸೌಖ್ಯಕ್ಕಾಗಿ ಸ್ಥೂಲವಾಗಿ ನಾಲ್ಕು ವಿಷಯ ಗಳನ್ನು ಲಕ್ಷ್ಯದಲ್ಲಿಡಬೇಕು.

೧. ಮಾತೃಸೌಖ್ಯಕ್ಕಾಗಿ ಚತುರ್ಥ ಸ್ಥಾನದಲ್ಲಿರುವ ಗ್ರಹ ಹಾಗೂ ಚತುರ್ಥೇಶನ ಬಲಾಬಲ.

೨. ಶುಕ್ರ-ಚಂದ್ರರ ಬಲಾಬಲ.

ಇದರಂತೆಯೇ ಪಿತೃಸೌಖ್ಯದ ವಿಷಯವಾಗಿ ೧. ದಶಮ ಸ್ಥಾನದಲ್ಲಿರುವ ಗ್ರಹಗಳ ಹಾಗೂ ದಶಮೇಶನ ಬಲಾಬಲ. ೨. ರವಿಯ ಬಲಾಬಲ.

ಇದಲ್ಲದೆ ಶುಭಗ್ರಹಗಳು ಚತುರ್ಥ, ದಶಮದಲ್ಲಿದ್ದರೆ ಮಾತೃ-ಪಿತೃ ಸೌಖ್ಯದ ಪೋಷಕರು ಪಾಪಗ್ರಹಗಳು ಚತುರ್ಥ-ದಶಮ ಸ್ಥಾನದಲ್ಲಿದ್ದರೆ ಮಾತೃ-ಪಿತೃ ಸೌಖ್ಯಕ್ಕೆ ಅಭಾವಕಾರಕಗಳು.

ಈ ಸಂಗತಿಗಳಿಂದ ಯಾರೊಬ್ಬ ವ್ಯಕ್ತಿಯ ಮಾತಾಪಿತರ ಸೌಖ್ಯದ ವಿಷಯವಾಗಿ ನಿರ್ಣಯಿಸಲು ಬರುತ್ತದೆ.

### ೩. ಪಿತ್ರಾರ್ಜಿತ ಆಸ್ತಿಯ ಸೌಖ್ಯ

ಯಾರೊಬ್ಬ ವ್ಯಕ್ತಿಯ ಜೀವನದಲ್ಲಿ ಪಿತ್ರಾರ್ಜಿತ ಆಸ್ತಿಯ ಸೌಖ್ಯದ ವಿಷಯವಾಗಿ ತಿಳಿಯಲು ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕು—

೧. ದ್ವಿತೀಯ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ದ್ವಿತಿಯೇಶನ ಬಲಾಬಲ.

೨. ಗುರು-ಶುಕ್ರರ ಬಲಾಬಲ.

ಈ ಸಂಗತಿಗಳಿಂದ ಪಿತ್ರಾರ್ಜಿತ ವಿಷಯದ ಬಗೆಗೆ ನಿರ್ಣಯಿಸಲು ಬರುತ್ತದೆ.

### ೪. ವಿವಾಹ ಹಾಗೂ ವೈವಾಹಿಕ ಜೀವನ

ವಿವಾಹ ಹಾಗೂ ವೈವಾಹಿಕ ಜೀವನದ ಸೌಖ್ಯದ ವಿಷಯವಾಗಿ ವಿಚಾರಿಸಲು ನಾವು ಮೂರು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧. ಸಪ್ತಮಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಸಪ್ತಮೇಶನ ಬಲಾಬಲ.

೨. ಶುಕ್ರನ ಬಲಾಬಲ.

೩. ಸಪ್ತಮಸ್ಥಾನದಮೇಲೆ ಇರುವ ಇತರ ಗ್ರಹಗಳ ದೃಷ್ಟಿಯ

### ೫. ಸಂತತಿ ಹಾಗೂ ಸಂತಾನಸೌಖ್ಯ

ಸಂತತಿ ಹಾಗೂ ಸಂತಾನ ಸಖ್ಯದ ವಿಷಯವಾಗಿ ನಾವು ಸ್ಥೂಲವಾಗಿ ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು—

೧. ಪಂಚಮಸ್ಥಾನದಲ್ಲಿರುವ ಗ್ರಹಗಳ ಬಲಾಬಲ. ಹಾಗೂ ಪಂಚಮೇಶನ ಬಲಾಬಲ.

೨. ಗುರುವಿನ ಬಲಾಬಲ.

ಈ ಎರಡು ಸಂಗತಿಗಳ ಮೇಲಿಂದ ಯಾರೊಬ್ಬ ವ್ಯಕ್ತಿಯ ಸಂತತಿ ಹಾಗೂ ಸಂತಾನ ಸೌಖ್ಯದ ಬಗ್ಗೆ ನಿರ್ಣಯಿಸಲು ಬರುತ್ತದೆ.

### ೬. ಬಂಧು-ಭಗಿನಿಯರ ಸೌಖ್ಯ

ಬಂಧು-ಭಗಿನಿಯರ ಸೌಖ್ಯದ ವಿಷಯವಾಗಿ ನಾವು ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು—

೧. ತೃತೀಯ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ತೃತೀಯಾಧೀಶನ ಬಲಾಬಲ.

೨. ತೃತೀಯಸ್ಥಾನದ ಮೇಲೆ ದೃಷ್ಟಿ ಇರುವ ಗ್ರಹಗಳ ಬಲಾಬಲ.

### ೭. ಶಿಕ್ಷಣ ಹಾಗೂ ಬುದ್ಧಿಮತ್ತೆ

ಶಿಕ್ಷಣ ಹಾಗೂ ಬುದ್ಧಿಮತ್ತೆಯ ವಿಷಯಕ್ಕಾಗಿ ಸ್ಥೂಲವಾಗಿ ನಾವು ಮೂರು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು—

೧. ಪಂಚಮಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಪಂಚಮೇಶನ ಬಲಾಬಲ.

೨. ದ್ವಿತೀಯ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ದ್ವಿತಿಯೇಶನ ಬಲಾಬಲ.

೩. ಗುರು-ಬುಧರ ಬಲಾಬಲ.

ಈ ಮೂರು ಸಂಗತಿಗಳ ಮೇಲಿಂದ ಯಾರೊಬ್ಬರ ಶಿಕ್ಷಣ ಹಾಗೂ ಬುದ್ಧಿಮತ್ತೆಯ ಬಗ್ಗೆ ನಿರ್ಣಯಿಸಲು ಬರುತ್ತದೆ.

## ೮. ಉದ್ಯೋಗ

ಯಾರೊಬ್ಬರ ಉದ್ಯೋಗದ ವಿಷಯವಾಗಿ ನಾವು ಅನೇಕ ಸಂಗತಿಗಳನ್ನು ನೋಡಬೇಕಾಗುತ್ತದೆ. ಮುಖ್ಯವಾಗಿ ವ್ಯಕ್ತಿಯು ಉದ್ಯೋಗ [illegible] ಹದು ಸ್ವತಂತ್ರವೃತ್ತಿಯೊ? ನೌಕರಿಯೋ? ಎಂಬುದನ್ನು [illegible] ಇವುಗಳ ಸಂಪೂರ್ಣ ವಿವರಣೆಯನ್ನು ನಮ್ಮ "ಉದ್ಯೋಗ ಜ್ಯೋತಿಷ್ಯ" ಗ್ರಂಥದಲ್ಲಿ ಕೊಡಲಾಗಿದೆ.

ಹಿಂದೆ ಕಾಣಿಸಿದ ಈ ಎಂಟೂ ಸಂಗತಿಗಳನ್ನು [illegible] ಶೀಲಿಸಿದಲ್ಲಿ ಅನೇಕ ಜಾತಕಗಳ ಲಗ್ನ ಹಾಗೂ ರಾಶಿಗಳನ್ನು [illegible] ನಿರ್ಣಯಿಸಲು ಹಾಗೂ ಖಚಿತಪಡಿಸಲು ಪ್ರಯೋಜನವಾಗುತ್ತದೆ. [illegible] ಕೆಲವರಲ್ಲಿ ಈ ಎಂಟು ಸಂಗತಿಗಳ ಹೊರತಾಗಿ ಮತ್ತೆ ಬೇರೆ ಸಂಗತಿಗಳ ವಿಶೇಷವಿರುತ್ತವೆ.

೧. ಪರಸ್ತ್ರೀ ಪರಪುರುಷ ಅನೈತಿಕಸಂಬಂಧ ( [illegible] ವಿಷಯವಾಗಿ).

೨. ಸಂಗೀತ, ಸಾಹಿತ್ಯ ಮೊದಲಾದ ಲಲಿತಕಲೆಯ ವಿಷಯದಲ್ಲಿ ಪ್ರಾವೀಣ್ಯತೆ.

೩. ರಾಜಕೀಯ ಸಾಮಾಜಿಕ ಕಾರ್ಯದಲ್ಲಿ ಆಸ್ಥೆ.

೪. ಜೀವನದಲ್ಲಿಯ ಅಪಘಾತಾದಿಗಳು (Accidents).

೫. ವಾಹನಸೌಖ್ಯ

೬. ಆಕಸ್ಮಿಕ ಧನಯೋಗ

೭. ಪರದೇಶ ಪ್ರಯಾಣಯೋಗ.

### ೧. ಪರಸ್ತ್ರೀ-ಪರಪುರುಷ ಅನೈತಿಕ ಸಂಬಂಧ

ಯಾರೊಬ್ಬ ವ್ಯಕ್ತಿಗೆ ಪರಸ್ತ್ರೀ ಪರಪುರುಷ ಅನೈತಿಕ ಸಂಬಂಧ [illegible] ಅತಿ ಕಾಮುಕತೆಯ ವಿಷಯವಾಗಿ ವಿಚಾರಿಸಲು ನಾವು ಮುಂದಿನ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧. ವ್ಯಕ್ತಿಯು [illegible]

೨. ಜಾತಕದಲ್ಲಿ ಶುಕ್ರ, ಚಂದ್ರ, ಮಂಗಳ ಗ್ರಹಗಳ ಬಲಾಬಲ.

೩. ಪಂಚಮ, ಅಷ್ಟಮ, ವ್ಯಯ ಈ ಸ್ಥಾನಾಧೀಶರ ಹಾಗೂ ಈ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ.

ಇದಲ್ಲದೇ ಶುಕ್ರ-ಮಂಗಳ, ಶುಕ್ರ-ಚಂದ್ರ, ಚಂದ್ರ-ಮಂಗಳ, ಶುಕ್ರ-ಶನಿ, ಚಂದ್ರ-ಶನಿ ಈ ಗ್ರಹಗಳ ಯುತಿಯೋಗ ಇಲ್ಲವೇ ಪ್ರತಿಯೋಗ ಪಂಚಮ ವ್ಯಯ, ಅಷ್ಟಮ ಈ ಸ್ಥಾನದಲ್ಲಿದ್ದ ವ್ಯಕ್ತಿಗೆ ಪರಸ್ತ್ರೀ-ಪರಪುರುಷರ ಅನೈತಿಕ ಸಂಬಂಧ ಬರುತ್ತದೆ. ಅಥವಾ ಆ ವ್ಯಕ್ತಿಯು ಅತೀ ಕಾಮುಕನಿರುವನು.

**೨. ಸಂಗೀತ ಸಾಹಿತ್ಯದ ಅಭಿರುಚಿ**

ಸಂಗೀತ ಸಾಹಿತ್ಯ ಮುಂತಾದ ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಇಲ್ಲವೆ ಅಭಿರುಚಿ ಇರಲು ಎರಡೂ ಸಂಗತಿಗಳನ್ನು ಸ್ಥೂಲವಾಗಿ ಪರಿಶೀಲಿಸಬೇಕು

೧. ಬುಧ-ಶುಕ್ರರ ಬಲಾಬಲ.

೨. ಲಗ್ನ, ದ್ವಿತೀಯ, ಪಂಚಮ ಈ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಈ ಸ್ಥಾನಾಧೀಶರ ಬಲಾಬಲ.

**೩. ರಾಜಕೀಯ ಸಾಮಾಜಿಕ ವರ್ಚಸ್ಸು**

ರಾಜಕೀಯ ಹಾಗೂ ಸಾಮಾಜಿಕ ಕಾರ್ಯದಲ್ಲಿ ವ್ಯಕ್ತಿತ್ವ ಹಾಗೂ ಧುರೀಣತ್ವ ಪಡೆಯಲು ನಾವು ಎರಡೂ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು—

೧. ರವಿ, ಚಂದ್ರ, ಗುರು, ಶುಕ್ರರ ಬಲಾಬಲ.

೨. ಯೋಗಕಾರಕ ಗ್ರಹಗಳ ಪ್ರಭಾವ.

**೪. ಜೀವನದಲ್ಲಿ ಅಪಘಾತಾದಿಗಳು**

ಯಾರೊಬ್ಬ ವ್ಯಕ್ತಿಗೆ ಅಪಘಾತಗಳಾಗಲು ನಾವು ಮೂರು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು—

೧. ಲಗ್ನ, ಷಷ್ಠ, ಅಷ್ಟಮ ಈ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಈ ಸ್ಥಾನಾಧೀಶರ ಬಲಾಬಲ.

೨. ರವಿ, ಚಂದ್ರ, ಶನಿ, ಮಂಗಳ ಈ ನಾಲ್ಕು ಗ್ರಹಗಳ ಯುತಿಯೋಗ ಹಾಗೂ ಪ್ರತಿಯೋಗಗಳಿಂದುಂಟಾಗುವ ಪರಿಣಾಮ.

೩. ಗೋಚರೀ ಗ್ರಹಗಳ ಹಾಗೂ ದಶೆ ಅಂತರ್ದಶೆಗಳ ಪರಿಣಾಮ.

೫. ವಾಹನಸೌಖ್ಯ

ಯಾರೊಬ್ಬರ ವಾಹನಸೌಖ್ಯದ ವಿಷಯವಾಗಿ ನಾವು ಸ್ಥೂಲವಾಗಿ ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧. ಶುಕ್ರ, ಚಂದ್ರರ ಬಲಾಬಲ

೨. ಚತುರ್ಥ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಚತುರ್ಥೇಶನ ಬಲಾಬಲ.

ಈ ಎರಡು ಸಂಗತಿಗಳಿಂದ ಯಾರೊಬ್ಬ ಜಾತಕನ ವಾಹನಸೌಖ್ಯದ ವಿಷಯವಾಗಿ ನಿರ್ಣಯಿಸಲು ಬರುತ್ತದೆ.

೬. ಆಕಸ್ಮಿಕ ಧನಯೋಗ

ಯಾರೊಬ್ಬ ವ್ಯಕ್ತಿಯ ಆಕಸ್ಮಿಕ ಧನಯೋಗದ ವಿಷಯವಾಗಿ ವಿಚಾರಿಸಲು ನಾವು ಅನೇಕ ಸಂಗತಿಗಳನ್ನು ನೋಡಬೇಕಾಗುತ್ತದೆ. ಇವುಗಳ ವಿವರಣೆ ನಮ್ಮ " ಆಕಸ್ಮಿಕ ಧನಯೋಗ " ಎಂಬ ಗ್ರಂಥದಲ್ಲಿ ಕೊಡಲಾಗಿದೆ.

ಪರದೇಶ ಪರ್ಯಟನ ಯೋಗ

ಇತ್ತೀಚೆಗೆ ಅನೇಕರು ಪರದೇಶಪ್ರಯಾಣ ಮಾಡಲು ಇಚ್ಛಿಸುತ್ತಾರೆ ಪರದೇಶ ಪ್ರಯಾಣ ಮಾಡುವುದು ಎಂದರೆ ಜೀವನದಲ್ಲಿಯ ಒಂದು ದೊಡ್ಡ ಸಾಧನೆ. ಅದೊಂದು ದೊಡ್ಡ ಧ್ಯೇಯವೆಂದು ತಿಳಿಯುತ್ತಾರೆ. ಸಾಮಾನ್ಯವಾಗಿ ಪರದೇಶ ಪ್ರಯಾಣ ಮಾಡಬಯಸುವವರಲ್ಲಿ ಎರಡು ವರ್ಗಗಳಿವೆ:—

೧. ಹೆಚ್ಚಿನ ಶಿಕ್ಷಣ ಕೋರ್ಸ ಮೊದಲಾದ ವಿದ್ಯಾಭ್ಯಾಸಕ್ಕಾಗಿ ಹೋಗುವ ಒಂದು ವರ್ಗ.

೨. ಸಂಘ-ಸಂಸ್ಥೆಗಳ ಪ್ರತಿನಿಧಿಯೆಂದು ಕಾರ್ಯಕ್ಕಾಗಿ ಹೋಗುವ ಎರಡನೇ ವರ್ಗ.

ಯಾವುದೇ ಕಾರಣದಿಂದ ಹೋಗಬಯಸುವಲ್ಲಿ ' ಪರದೇಶಗಮನ ' ವೆಂದರೆ ಜೀವನದಲ್ಲಿಯ ಒಂದು ಮಹತ್ವದ ಸಂಗತಿ, ಘಟನೆ ಎಂದು ತಿಳಿದಾಗ ಜ್ಯೋತಿಷ್ಯಶಾಸ್ತ್ರದ ಪ್ರಕಾರ ಈ ಯೋಗ ಪಡೆಯಲು ಜಾತಕ ಹೇಗಿರಬೇಕು, ಗ್ರಹಗಳ ಬಲಾಬಲ ಎಂತಹದಿರಬೇಕು ಎಂಬುದನ್ನು ಪರಿಶೀಲಿಸಬೇಕು.

ಇದರಿಂದ ಸಂದಿಗ್ಧ ಲಗ್ನ ರಾಶಿಗಳಲ್ಲಿ ನಿರ್ದಿಷ್ಟ ಲಗ್ನರಾಶಿಗಳನ್ನು ನಿರ್ಣಯಿಸಲು ಸಹಾಯವಾಗುತ್ತದೆ.

ಯಾರೊಬ್ಬರಿಗೆ ಪರದೇಶಗಮನ ಯೋಗವಿದೆಯೋ ಹೇಗೆ ಎಂಬುದನ್ನು ತಿಳಿಯಲು ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ.—

೧. ಮೂಲ ಜಾತಕದಲ್ಲಿಯ ಗ್ರಹಗಳ ಯೋಗ

೨. ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ

ಮೊದಲನೆಯದಾಗಿ ಯಾರೊಬ್ಬರಿಗೆ ಪರದೇಶಗಮನದ ಯೋಗವಿರಲು ಅವರ ಮೂಲ ಜಾತಕದಲ್ಲಿ ಮೂರು ಸಂಗತಿಗಳಿರಬೇಕು—

೧. ಅನೇಕ ಗ್ರಹಗಳು ಲಗ್ನ ಭಾಗ್ಯ, ಸಪ್ತಮ, ತೃತೀಯ, ವ್ಯಯ ಈ ಐದು ಸ್ಥಾನಗಳಲ್ಲಿ ಹೆಚ್ಚು ಗ್ರಹಗಳಿರಬೇಕು ಅದರಲ್ಲಿಯೂ ಲಗ್ನ, ಭಾಗ್ಯ, ಸಪ್ತಮ ಈ ಸ್ಥಾನಗಳಲ್ಲಿ ಹೆಚ್ಚು ಗ್ರಹಗಳಿರಬೇಕು.

೨. ಚರ ಇಲ್ಲವೆ ದ್ವಿಸ್ವಭಾವದ ರಾಶಿಯು ಲಗ್ನರಾಶಿ ಇರಬೇಕು.

೩. ಅನೇಕ ಗ್ರಹಗಳು ಚರ ಇಲ್ಲವೆ ದ್ವಿಸ್ವಭಾವದ ರಾಶಿಯಲ್ಲಿರಬೇಕು,

ಎರಡನೆಯದಾಗಿ ಗುರುವು ಗೋಚರಿಯಿಂದ ೧-೭-೯-೧೧ ನೇಯವನಾಗಿ ಬಂದರೆ ಶನಿಯು ೩-೭-೯-೧೦-೧೧ ನೇಯವನಾಗಿ ಬಂದರೆ ಪರದೇಶಗಮನದ ಯೋಗವನ್ನುಂಟು ಮಾಡುತ್ತಾನೆ ಇದಲ್ಲದೆ ಗೋಚರಿಯಿಂದ ಗುರು-ಶನಿಯರ ಪರಿಭ್ರಮಣವು ಲಗ್ನ, ತೃತೀಯ, ಸಪ್ತಮ ಭಾಗ್ಯ ಈ ಸ್ಥಾನದ ಮೇಲಿಂದ ಆಗುವಾಗ ಪರದೇಶಗಮನ ಯೋಗವನ್ನು ಕೊಡುತ್ತದೆ

ಮೂಲಜಾತಕದಲ್ಲಿ ಶಿಕ್ಷಣಯೋಗ ಉತ್ತಮವಿದ್ದರೆ ಶಿಕ್ಷಣಕಾರ್ಯಕ್ಕಾಗಿ ಗುರುವನ್ನು,ರವಿಯು ಬಲಾಢ್ಯನಿದ್ದರೆ ಸಂಘ-ಸಂಸ್ಥೆಗಳ ಪ್ರತಿನಿಧಿಯೆಂದು ಪರದೇಶ ಪ್ರಯಾಣ ಮಾಡುವುದು.

ಈ ಎರಡು ಸಂಗತಿಗಳಿಂದ ಯಾರೊಬ್ಬರ ಪರದೇಶ ಪ್ರಯಾಣದ ವಿಷಯಕ್ಕಾಗಿ ನಿರ್ಣಯಿಸಲು ಬರುತ್ತದೆ. ಹಾಗೂ ಈ ಯೋಗದ ಆಧಾರದಿಂದ ಸಂದಿಗ್ಧ ಲಗ್ನ, ರಾಶಿಗಳ ನಿರ್ಣಯಿಸಲು ಬರುತ್ತದೆ.

ಈ ಎಲ್ಲ ಸಂಗತಿಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ ಅನೇಕ ಜಾತಕಗಳ ಲಗ್ನ ಹಾಗೂ ರಾಶಿಗಳನ್ನು ನಿರ್ಧರಿಸಲು ಹಾಗೂ ನಿಶ್ಚಿತ ಪಡಿಸಲು ಸಹಾಯವಾಗುತ್ತದೆ.

## ಸಂದಿಗ್ಧ ರಾಶಿಯ ನಕ್ಷತ್ರಗಳ ವಿಭಿನ್ನತೆ

ಕೃತ್ತಿಕಾ, ಮೃಗಶಿರಾ, ಪುನರ್ವಸು, ಉತ್ತರಾ, ಚಿತ್ರಾ, ವಿಶಾಖಾ, ಉತ್ತರಾಷಾಢಾ, ಧನಿಷ್ಠಾ, ಪೂರ್ವಾಭಾದ್ರಪದ ಈ ಒಂಭತ್ತು ನಕ್ಷತ್ರಗಳು ಎರಡು ರಾಶಿಗಳಿಗೆ ಎಡೆಗೊಡುವ ನಕ್ಷತ್ರಗಳಿವೆ. ಇವನ್ನು ದರ್ಶನ, ಪ್ರಶ್ನೆ, ಸಂಭಾಷಣೆ ನಡೆಯುವರೀತಿ ಈ ಮೊದಲಾದ ವಿಧಾನಗಳಿಂದ ನಿರ್ಧರಿಸ ಬೇಕಾಗುತ್ತದೆ. ಅವುಗಳ ವಿವೇಚನೆಯನ್ನು ಈ ಕೆಳಗಿನಂತೆ ಕೊಡಲಾಗಿದೆ:—

### ೧. ದರ್ಶನ ಹಾಗೂ ಮುಖಲಕ್ಷಣಗಳ ಮೂಲಕ ರಾಶಿಗಳನ್ನು ನಿರ್ಧರಿಸುವ ನಕ್ಷತ್ರಗಳು

ಮೊದಲನೆಯದಾಗಿ ಕೃತ್ತಿಕಾ, ಉತ್ತರಾ, ವಿಶಾಖಾ ಈ ನಕ್ಷತ್ರಗಳ ಸಂದಿಗ್ಧ ರಾಶಿಗಳಲ್ಲಿ ಭೇದ ಮಾಡಿ ನಿಶ್ಚಿತ ರಾಶಿಯನ್ನು ನಿರ್ಣಯಿಸುವದು ಅತಿ ಸುಲಭದ ಕೆಲಸ. ಕೃತ್ತಿಕಾ ನಕ್ಷತ್ರದ ಮೇಷ, ವೃಷಭ ರಾಶಿಗಳಲ್ಲಿಯೂ ಉತ್ತರಾ ನಕ್ಷತ್ರದ ಸಿಂಹ, ಕನ್ಯಾ ರಾಶಿಗಳಲ್ಲಿಯೂ ವಿಶಾಖಾ ನಕ್ಷತ್ರದ ತುಲಾ, ವೃಶ್ಚಿಕ ಈ ರಾಶಿಯ ವಿಂಗಡಣೆಯು ಸ್ವಭಾವ ದರ್ಶನ ಮುಖಲಕ್ಷಣ ನಡೆಯುವ ರೀತಿ ಮೊದಲಾದವುಗಳಲ್ಲಿ ಸಾಮ್ಯತ್ವದ ಒಂದೂ ಲಕ್ಷಣವಿರುವದಿಲ್ಲ. ಇಷ್ಟೇ ಅಲ್ಲದೆ ಒಂದಕ್ಕೊಂದು ವಿರುದ್ಧ ಸ್ವಭಾವ ಗುಣಧರ್ಮವಿರುವದರಿಂದ ಈ ರಾಶಿಗಳನ್ನು ನಿರ್ಧರಿಸುವದು ಹಾಗೂ ನಿರ್ಣಯಿಸುವದು ಸುಲಭವಾಗುತ್ತದೆ

ಉದಾಹರಣೆಗೆ ಕೃತ್ತಿಕಾ ನಕ್ಷತ್ರದ ಮೊದಲನೆಯ ಚರಣ ಮೇಷ ರಾಶಿಯದೂ ಎರಡನೆಯ ಚರಣ ವೃಷಭ ರಾಶಿಯದೂ ಇರುತ್ತದೆ. ಆದರೆ ಮೇಷರಾಶಿಯ ಹಾಗೂ ವೃಷಭರಾಶಿಯ ಸ್ವಭಾವ ಮುಖಲಕ್ಷಣ ನಡೆಯುವ ಕ್ರಮದಿಂದ ಬಹು ಬೇಗ ಗುರುತಿಸಲಾಗುತ್ತದೆ. ಇದರಂತೆಯೇ ಉತ್ತರಾ ನಕ್ಷತ್ರದ ಮೊದಲನೆಯ ಚರಣದವರು ಸಿಂಹರಾಶಿಯವರೂ, ಎರಡನೆಯ ಚರಣದವರು ಕನ್ಯಾರಾಶಿಯವರು ಇದ್ದು ಸಂದಿಗ್ಧ ರಾಶಿಯಲ್ಲಿ ಸಿಂಹ ಹಾಗೂ ಕನ್ಯಾರಾಶಿಯ ಜನರ ದರ್ಶನ, ಮುಖಲಕ್ಷಣ, ಸಂಭಾಷಣೆ, ನಡಿಗೆಗಳಲ್ಲಿ ಅಂತರ ಮಾಡುವುದು ಸುಲಭದ ಸಂಗತಿ. ಇದರಂತೆಯೇ ವಿಶಾಖಾ ನಕ್ಷತ್ರದ ಮೊದಲಿನ ಮೂರು ಚರಣ ತುಲಾ ರಾಶಿಯದೂ ಕೊನೆಯ ಚರಣ ವೃಶ್ಚಿಕ ರಾಶಿಯದೂ ಇರುತ್ತದೆ.

ತುಲಾ ರಾಶಿಯ ಜನರು ಉದ್ದವಾದ ಸರಳವಾದ ಮೂಗು ಇರುತ್ತದೆ. ಆದರೆ ಅದೇ ನಕ್ಷತ್ರದ ವೃಶ್ಚಿಕ ರಾಶಿಯ ಜನರು ಸ್ಥೂಲದೇಹದವರೂ ಕಿಂಚಿತ್ ಕಪ್ಪುವರ್ಣದವರೂ ಇದ್ದು ಇವರ ಮೂಗಿನ ಹೊಳ್ಳೆ ಉಬ್ಬಿದ್ದಿರುತ್ತದೆ ಹಾಗೂ ಚಪ್ಪಟೆ ಮೊಂಡ ಮೂಗು ಇರುತ್ತದೆ. ಹೀಗೆ ತುಲಾ ಹಾಗೂ ವೃಶ್ಚಿಕ ರಾಶಿಯ ಜನರ ಮುಖಲಕ್ಷಣಗಳ ಮೇಲಿಂದ ನಿರ್ಣಯಿಸಬಹುದು.

### ೨. ಸಂಭಾಷಣೆ ಹಾಗೂ ಸ್ವಭಾವಗಳ ಮೇಲಿಂದ ರಾಶಿಗಳನ್ನು ನಿರ್ಧರಿಸುವ ನಕ್ಷತ್ರಗಳು

ಮೃಗಶಿರಾ, ಚಿತ್ರಾ, ಉತ್ತರಾಷಾಢಾ, ಧನಿಷ್ಠಾ ಈ ನಾಲ್ಕು ನಕ್ಷತ್ರಗಳ ಸಂದಿಗ್ಧ ರಾಶಿಗಳಾದ ವೃಷಭ-ಮಿಥುನ, ಕನ್ಯಾ-ತುಲಾ, ಧನು-ಮಕರ, ಮಕರ-ಕುಂಭ ಈ ಸಂದಿಗ್ಧ ರಾಶಿಯ ಜನರ ದರ್ಶನ ಹಾಗೂ ಮುಖಲಕ್ಷಣಗಳಿಂದ ನಿರ್ಣಯಿಸುವದು ಕಠಿಣ ಕಾರ್ಯವು. ಏಕೆಂದರೆ ಈ ರಾಶಿಗಳ ದರ್ಶನ ಹಾಗೂ ಮುಖಲಕ್ಷಣಗಳಲ್ಲಿ ಸಾಮ್ಯತ್ವ ಬಹಳವಿದೆ.

ಉದಾಹರಣೆಗೆ ಮೃಗಶಿರಾ ನಕ್ಷತ್ರದ ಮೊದಲನೆಯ ಎರಡು ಚರಣಗಳ ವೃಷಭ ರಾಶಿಯುವೂ ಕೊನೆಯ ಎರಡು ಚರಣಗಳು ಮಿಥುನ ರಾಶಿಯುವೂ ಇದ್ದು ವೃಷಭ ಹಾಗೂ ಮಿಥುನ ರಾಶಿಯ ಜನರ ಮುಖಲಕ್ಷಣ ಹಾಗೂ ದರ್ಶನದಲ್ಲಿ ಬಣ್ಣದಲ್ಲಿ ಭೇದಮಾಡುವ ಅಂಶವಿರುವದಿಲ್ಲ. ಇಂಥ ಸಂದಿಗ್ಧ ರಾಶಿಗಳನ್ನು ನಿರ್ಣಯಿಸಲು ಸಂಭಾಷಣೆ ಹಾಗೂ ಸ್ವಭಾವದಿಂದ ಮಾತ್ರ ನಿರ್ಣಯಿಸಲು ಬರುತ್ತದೆ.

ಇದರಂತೆಯೇ ಉತ್ತರಾಷಾಢಾ ನಕ್ಷತ್ರದ ಮೊದಲನೆಯ ಚರಣ ಧನು ರಾಶಿಯದೂ ಕೊನೆಯ ಮೂರು ಚರಣಗಳು ಮಕರ ರಾಶಿಯದೂ ಇರುತ್ತದೆ. ಎರಡೂ ರಾಶಿಯ ಜನರು ಸ್ಥೂಲದೇಹದವರು ಇದ್ದು ಮುಖಲಕ್ಷಣದಲ್ಲಿಯೂ ಕೂಡ ವಿಶೇಷ ಭೇದ ಇರುವದಿಲ್ಲ. ಆದುದರಿಂದ ಇಂಥ ಸಂದಿಗ್ಧ ನಕ್ಷತ್ರಗಳ ರಾಶಿಗಳನ್ನು ಸಂಭಾಷಣೆ ಹಾಗೂ ಸ್ವಭಾವದಿಂದ ನಿರ್ಣಯಿಸಲು ಬರುತ್ತದೆ.

ಇದರಂತೆ ಧನಿಷ್ಠಾ ನಕ್ಷತ್ರದ ಮಕರ-ಕುಂಭ ಸಂದಿಗ್ಧ ರಾಶಿಗಳ ನಿರ್ಣಯವನ್ನು ಕೂಡ ಸಂಭಾಷಣೆ ಹಾಗೂ ಸ್ವಭಾವದಿಂದ ನಿರ್ಣಯಿಸಬೇಕು.

### ೩. ಕೇವಲ ನಡೆಯುವ ರೀತಿಯಿಂದ (Walking Style) ರಾಶಿಗಳನ್ನು ನಿರ್ಧರಿಸುವ ಕ್ರಮಗಳು

ಪುನರ್ವಸು ಹಾಗೂ ಪೂರ್ವಾಭಾದ್ರಪದ ಈ ಎರಡು ನಕ್ಷತ್ರಗಳ ಸಂದಿಗ್ಧ ರಾಶಿಗಳಿಂದ ಮಿಥುನ-ಕರ್ಕ, ಕುಂಭ-ಮೀನ ಈ ಸಂದಿಗ್ಧ ರಾಶಿಗಳನ್ನು ನಿರ್ಧರಿಸಲು ಕೇವಲ ನಡೆಯುವ ರೀತಿಯಿಂದ ನಿರ್ಣಯಿಸುವದು ಸುಲಭವಾಗುತ್ತದೆ. ಇವುಗಳ ವಿವರಣೆಯನ್ನು ಇದೇ ಪುಸ್ತಕದ ಪುಟ ೨೦-೨೧ರಲ್ಲಿ ಕೊಡಲಾಗಿದೆ.

### ಕೈಕುಲುಕುವ (Shake - Hand) ರೀತಿಯಿಂದ ರಾಶಿಗಳನ್ನು ನಿರ್ಧರಿಸುವ ಕ್ರಮ

ಯಾರೊಬ್ಬರು ಒಬ್ಬರಿಗೊಬ್ಬರನ್ನು ಅಭಿನಂದಿಸುವಾಗ ಇಲ್ಲವೆ ಉಪಕಾರ ಸ್ಮರಣೆ ಮಾಡುವಾಗ ಅಥವಾ ಬೀಳ್ಕೊಡುವಾಗ ಇಲ್ಲವೆ ವಂದಿಸುವ ಪೂರ್ವದಲ್ಲಿ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳುವಾಗ ಒಬ್ಬರಿಗೊಬ್ಬರು ಕೈಕುಲುಕುವ ಪದ್ಧತಿಯನ್ನು ನಾವು ಕಾಣುವೆವು. ಈ ಕೈಕುಲುಕುವ ವಿಧಾನಗಳಿಂದ ಯಾರೊಬ್ಬ ವ್ಯಕ್ತಿಯ ಸ್ವಭಾವವು ತಿಳಿಯುತ್ತದೆ. ಹಾಗೂ ಸ್ವಭಾವದಿಂದ ರಾಶಿಗಳನ್ನು ನಿರ್ಧರಿಸಲು ಬರುತ್ತದೆ.

ಕೈಕುಲುಕುವುದರಲ್ಲಿ ಪ್ರಕಾರಗಳು

೧. ಎರಡೂ ಕೈಗಳಿಂದ ಕೈ ಕುಲುಕುವಿಕೆ.

೨. ಕೈಕುಲುಕುವಾಗ ಕೈಗಳನ್ನು ಅಲುಗಾಡಿಸುತ್ತ ಬಹಳ ವೇಳೆಯವರೆಗೆ ಕೈ ಹಿಡಿಯುವಿಕೆ.

೩. ಒಮ್ಮೆಲೇ ಕೈಯನ್ನು ತಟ್ಟುವಿಕೆ.

ಹೀಗೆ ನಾವು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು

೧. ಒಂದು ಕೈಯಿಂದ ಕೈಯನ್ನು ಕುಲುಕಿಸುತ್ತ ಮತ್ತೊಂದು ಕೈಯನ್ನು ಹಿಡಿಯುವ ಈ ವರ್ಗದ ಜನರು ಹೆಚ್ಚಾಗಿ ವೃಷಭ, ಕರ್ಕ, ಮೀನ ಈ ರಾಶಿಯವರು ಇರುವದು ಕಂಡುಬರುತ್ತದೆ. ಏಕೆಂದರೆ ಈ ವರ್ಗದ ಜನರು

ಭಾವನೆ; ಕಲ್ಪನೆ, ಊಹೆ ಭಯ ಈ ಮನೋವಿಕಾರದ ಗುಣಧರ್ಮವುಳ್ಳವರಿರುತ್ತಾರೆ.

೨. ಕೈಕುಲುಕುವಾಗ ಕೈಗಳನ್ನು ಅಲುಗಾಡಿಸುತ್ತ ಬಹಳ ವೇಳೆಯವರೆಗೆ ಹಿಡಿಯುವ ಈ ವರ್ಗದ ಜನರು ಹೆಚ್ಚಾಗಿ ಮಿಥುನ ಕನ್ಯಾ, ತುಲಾ, ಕುಂಭ ಈ ರಾಶಿಯವರಿರುವದು ಕಂಡುಬರುತ್ತದೆ ಏಕೆಂದರೆ ಇವರು ಪ್ರೇಮ, ವಿಶ್ವಾಸ, ವಿಲಾಸಿ, ಶೃಂಗಾರ, ಹಾಸ್ಯಪ್ರವೃತ್ತಿಯ ಗುಣಧರ್ಮದವರಿರುವದು ಕಂಡುಬರುತ್ತದೆ.

೩. ಒಮ್ಮೆಲೇ ಕೈಮೇಲೆ ಕೈಯನ್ನು ಒಡೆಯುವ ಜನರು ಹೆಚ್ಚಾಗಿ ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವರಿರುವದು ಕಂಡುಬರುತ್ತದೆ. ಏಕೆಂದರೆ ಈ ವರ್ಗದವರು ತಮ್ಮ ಅಭಿಪ್ರಾಯ, ಇಚ್ಛೆ, ಆದೇಶ, ನಿರ್ಣಯಗಳನ್ನು ವ್ಯಕ್ತಪಡಿಸುವದೇ ಮುಖ್ಯ ಗುಣಧರ್ಮವಿರುತ್ತದೆ.

ಇದಲ್ಲದೆ ಕೈಕುಲುಕುವಾಗ ಯಾರ ಕೈ ತೇವ (ಹಸಿ) ಹತ್ತುತ್ತದೆಯೋ ಅಂಥ ವ್ಯಕ್ತಿಗಳು ಹೆಚ್ಚಾಗಿ ಕರ್ಕ, ವೃಶ್ಚಿಕ, ವೃಷಭ, ಮಕರ, ಮೀನ ಈ ರಾಶಿಯವರಿರುವದು ಕಂಡುಬರುತ್ತದೆ. ಅಥವಾ ಅವರ ಜಾತಕದಲ್ಲಿ ಚಂದ್ರನು ರವಿಗಿಂತ ದೂರವಿರುವದು ಕಂಡುಬರುತ್ತದೆ

ಕೈಕುಲುಕುವಾಗ ಯಾರ ಕೈ ಉಷ್ಣ ಹಾಗೂ ಬಿರುಸು ಇರುವುದೋ ಅಂಥವರು ಹೆಚ್ಚಾಗಿ ಮೇಷ, ಸಿಂಹ, ಧನು ಈ ರಾಶಿಯವರಿರುವದು ಕಂಡುಬರುತ್ತದೆ.

ಕೈಕುಲುಕುವಾಗ ಯಾರ ಕೈ ಮೆತ್ತಗೆ ಹತ್ತುತ್ತದೆಯೋ ಅಂಥವರು ಹೆಚ್ಚಾಗಿ ವೃಷಭ, ಕರ್ಕ, ಮಿಥುನ, ಕನ್ಯಾ, ತುಲಾ ಕುಂಭ, ಮೀನ ಈ ರಾಶಿಯವರಿರುವದು ಕಂಡುಬರುತ್ತದೆ

ಕೈಕುಲುಕುವಾಗ ನಾಲ್ಕೂ ಬೆರಳುಗಳು ಹತ್ತುವುದಿಲ್ಲವೋ ಅಂಥವರ ಜಾತಕದಲ್ಲಿ ರವಿಯ ಹತ್ತಿರ ನಾಲ್ಕೈದು ಗ್ರಹಗಳಿರುತ್ತವೆ.

ಕೈಕುಲುಕುವಾಗ ಮೂರು ಬೆರಳುಗಳು ತಗಲುವದೋ ಅಂಥವರ ಜಾತಕದಲ್ಲಿ ಬುಧ-ಶುಕ್ರರು ರವಿಯ ಸಮೀಪವಿರುವದು ಕಂಡುಬರುತ್ತದೆ.

## ೬

## ಮಾದರಿಯ ಕುಂಡಲಿ (ಜಾತಕ) ಗಳು

ಒಂದನೇಯ ಎರಡನೆಯ ಮತ್ತು ಮೂರನೇಯ ಪ್ರಕರಣಗಳಲ್ಲಿ ಜನ್ಮಪತ್ರಿಕೆಯಿಲ್ಲದವನ ಜಾತಕಗಳನ್ನು ನಿರ್ಧರಿಸುವ ಕ್ರಮಗಳನ್ನು ವಿವೇಚಿಸಿ ೪ ನೆಯ ಪ್ರಕರಣದಲ್ಲಿ ಜಾತಕನ ಮುಖಲಕ್ಷಣಗಳ ಮೇಲಿಂದ ಲಗ್ನ, ರಾಶಿ ಹಾಗೂ ಗ್ರಹಗಳ ಬಲಾಬಲಗಳನ್ನು ಹೇಗೆ ಅರಿತುಕೊಳ್ಳಬೇಕು ಎಂಬುದನ್ನು ವಿವೇಚಿಸಿದೆವು. ೫ನೆಯ ಪ್ರಕರಣದಲ್ಲಿ ಸಂದಿಗ್ಧ ಲಗ್ನರಾಶಿಗಳ ನಿರ್ಧಿಷ್ಟ ಲಗ್ನರಾಶಿಗಳನ್ನು ನಿರ್ಧರಿಸಲು, ನಿಚಿತಪಡಿಸಲು ವೈಶಿಷ್ಟ್ಯಪೂರಕವಾದ ನಮ್ಮ ಅನುಭವಗಳನ್ನು ವಿವರಿಸಿದೆವು. ಈ ಆರನೇಯ ಪ್ರಕರಣದಲ್ಲಿ ಮೊದಲಿನ ಐದು ಪ್ರಕರಣಗಳಲ್ಲಿ ಅಭ್ಯಾಸಮಾಡಿದ ತತ್ವಗಳನ್ನು, ಸೂತ್ರಗಳನ್ನು ಪ್ರಯೋಗಮಾಡುವ ರೀತಿಯನ್ನು ಸೂಚಿಸಿ ಮಾರ್ಗದರ್ಶನ ನೀಡಲಾಗಿದೆ.

### ಮಾದರಿ ೧

<table>
<tr><td></td><td>ಲಗ್ನ<br>ಗುರು<br>ಮಂ</td><td>ರಾಹು</td><td>ರವಿ<br>ಬುಧ<br>ಶುಕ್ರ</td></tr>
<tr><td></td><td colspan="2" rowspan="2">ಮೇಷಲಗ್ನದ<br>ಜಾತಕ</td><td></td></tr>
<tr><td></td><td></td></tr>
<tr><td></td><td>ಶನಿ<br>ಕೇತು</td><td>ಚಂದ್ರ</td><td></td></tr>
</table>

<table>
<tr><td></td><td>ಗುರು<br>ಮಂ</td><td>ಲಗ್ನ<br>ರಾಹು</td><td>ರವಿ<br>ಬುಧ<br>ಶುಕ್ರ</td></tr>
<tr><td></td><td colspan="2" rowspan="2">ವೃಷಭಲಗ್ನದ<br>ಜಾತಕ</td><td></td></tr>
<tr><td></td><td></td></tr>
<tr><td></td><td>ಶನಿ<br>ಕೇತು</td><td>ಚಂದ್ರ</td><td></td></tr>
</table>

ಶಕೆ ೧೮೫೦ ನೇ ವಿಭವನಾಮ ಸಂವತ್ಸರದ ಆಷಾಢ ಶುದ್ಧ ಏಕಾದಶಿ ದಿನಾಂಕ ೨೮/೨೯-೬-೧೯೨೮ ನೇ ರಾತ್ರಿ ೨ ಗಂಟೆಯಿಂದ ೩ ಗಂಟೆಯ ಒಳಗೆ ಓರ್ವನು ಜನನವಾಗಿದೆ.

ಇಲ್ಲಿ ಆ ವ್ಯಕ್ತಿಯ ಜನ್ಮರಾಶಿ ತುಲಾ ಇದ್ದು ಲಗ್ನ ಮಾತ್ರ ಮೇಷವೋ, ವೃಷಭವೋ ಎಂಬುದು ಸಂದಿಗ್ಧವಿದೆ. ಆ ವ್ಯಕ್ತಿಯ ಜೀವನದ ಘಟನೆಗಳು ಮತ್ತು ದರ್ಶನ, ಸಂಭಾಷಣೆ, ನಡತೆ ಇವುಗಳು ಈ ಕೆಳಗಿನಂತಿರುತ್ತವೆ—

೧. ವ್ಯಕ್ತಿತ್ವ:— ಈ ವ್ಯಕ್ತಿಯು ಕುಳ್ಳನು ಇದ್ದು ಮಾತಿನಲ್ಲಿ ಅಸ್ಪಷ್ಟತೆ ಇದೆ.

೨. ಈ ವ್ಯಕ್ತಿಯು ಜ್ಯೇಷ್ಠಪುತ್ರನಿರುವನು.

೩. ಶಿಕ್ಷಣ:— ಉಚ್ಚ ಶಿಕ್ಷಣವಾಗಿದ ಎಂದರೆ M. Sc. Ph. D. ಹಾಗೂ ಪರದೇಶದಲ್ಲಿ ಎರಡು ವರುಷಗಳ ತರಬೇತಿ ಪಡೆದಿರುವನು.

೪. ವಾಹನಗಳಿಂದ ಅನೇಕ ಬಾರೆ ಅಪಘಾತಗಳಾಗಿವೆ. ೨೫-೪-೬೫ ರಂದು ಅಮೇರಿಕೆಯಲ್ಲಿ ಅಪಘಾತವಾಗಿತ್ತು.

೫. ವೃತ್ತಿ :–ಶೈಕ್ಷಣಿಕ ವಿಭಾಗದಲ್ಲಿ ನೌಕರಿ.

೬. ವೃತ್ತಿಯಲ್ಲಿ ಹಾಗೂ ಖಾತೆಗಳಲ್ಲಿ ಅನೇಕ ವೇಳೆ ಬದಲಾವಣೆ.

೭. ವಿವಾಹವು ಚಿಕ್ಕ ವಯಸ್ಸಿನಲ್ಲಿ ಆಗಿದೆ. ವಿವಾಹದ ನಂತರ ಭಾಗ್ಯೋದಯವಾದೆ.

ಈ ಮೇಲಿನ ವಿಷಯ ಹಾಗೂ ಘಟನೆಗಳಿಂದ ಈ ವ್ಯಕ್ತಿಯ ಜಾತಕವು ಮೇಷಲಗ್ನದ್ದು ಎಂದು ನಿಚಿತವಾಗುತ್ತದೆ. ಇದಕ್ಕೆ ಕೆಳಗಿನಂತೆ ವಿವರಣೆ ಕೊಡಲಾಗಿದೆ.

೧. ಮೇಷಲಗ್ನದ ಲಗ್ನದಲ್ಲಿ ಗುರು-ಮಂಗಳ ಇರುವುದರಿಂದ ಈ ಜಾತಕನ ಶಿಕ್ಷಣ ಪೂರ್ತಿಯಾಗಿದ್ದು ಉಚ್ಚ ಪದವೀಧರನನ್ನಾಗಿ ಮಾಡಿದೆ. ಇದು ವೃಷಭಲಗ್ನಕ್ಕೆ ಪೂರಕವಾಗುವುದಿಲ್ಲ.

೨. ಮೇಷಲಗ್ನಕ್ಕೆ ಪರದೇಶಗಮನದ ಯೋಗವುಂಟು. ವೃಷಭ ಲಗ್ನದ ಜಾತಕಕ್ಕೆ ಈ ಯೋಗದ ಅಭಾವವಿರುತ್ತದೆ.

೩. ಮೇಷಲಗ್ನದ ಪ್ರಕಾರ ಮಂಗಳನು ಲಗ್ನದಲ್ಲಿದ್ದು ಶನಿಯು ಶತ್ರುಕ್ಷೇತ್ರಿಯವನಾಗಿ ಅಷ್ಟಮದಲ್ಲಿದ್ದು ಮಂಗಳನಿಂದ ನೋಡಲ್ಪಡುವನು (ಎಂದರೆ ಶನಿ), ಮಂಗಳರ ಷಡಾಷ್ಟಕ ಯೋಗವಿದೆ. ಈ ಕಾರಣದಿಂದಲೇ ಇವರ ಜೀವನದಲ್ಲಿ ಅನೇಕ ಅಪಘಾತಗಳಾಗಿವೆ.

೪. ಮೇಷಲಗ್ನದ ಪ್ರಕಾರ ತೃತೀಯಲ್ಲಿ ರವಿ ಇರುವುದರಿಂದ ಇವರು ಜೇಷ್ಠಪುತ್ರರಿದ್ದಾರೆ.

೫. ಮೇಷಲಗ್ನದ ಪ್ರಕಾರ ದಶಮೇಶನು ಶತ್ರುಕ್ಷೇತ್ರಿಯಾಗಿ ಅಷ್ಟಮದಲ್ಲಿರುವುದರಿಂದ ಈ ವ್ಯಕ್ತಿಯ ಅನೇಕ ಖಾತೆ-ಹುದ್ದೆಗಳಲ್ಲಿ ಬದಲಾವಣೆಯಾಗಿದೆ.

೬. ಗುರು ಲಗ್ನದಲ್ಲಿರುವುದರಿಂದ ಶಿಕ್ಷಕವೃತ್ತಿಯಲ್ಲಿರುವುದು ಪೂರಕವು ಇದು ಮೇಷಲಗ್ನಕ್ಕೆ ಅನ್ವಯಿಸುವುದಲ್ಲದೆ ವೃಷಭಲಗ್ನಕ್ಕೆ ಅನ್ವಯಿಸುವುದಿಲ್ಲ.

೭. ಮೇಷಲಗ್ನದ ಅನುಸಾರ ಲಗ್ನದಲ್ಲಿ ಗುರುವು, ಸಪ್ತಮದಲ್ಲಿ ಚಂದ್ರನೂ ಇದ್ದು (ಗುರು-ಚಂದ್ರರ ಪ್ರತಿಯೋಗ), ಸಪ್ತಮೇಶನಾದ ಶುಕ್ರನು ಮಿತ್ರಕ್ಷೇತ್ರದಲ್ಲಿದ್ದು ಚಂದ್ರನೊಂದಿಗೆ ತ್ರಿಕೋಣಯೋಗ ಮಾಡುತ್ತಿದ್ದಾನೆ. ಈ ಕಾರಣದಿಂದಲೆ ಇವರ ವಿವಾಹವು ಚಿಕ್ಕ ವಯಸ್ಸಿನಲ್ಲಾಗಿದ್ದು ವಿವಾಹದ ನಂತರ ಭಾಗ್ಯೋದಯವಾಗಿದೆ.

೮. ಇವರು ಕುಳ್ಳರಿದ್ದಾರೆ. ಇದೊಂದೇ ಅಂಶ ಮೇಷಲಗ್ನವನ್ನು ನಿರ್ಧರಿಸಲು ಸಾಕು.

ಮೇಲಿನ ಈ ಎಲ್ಲ ಸಂಗತಿಗಳು ಮೇಷಲಗ್ನಕ್ಕೆ ಪೂರಕ ಇರುವವಲ್ಲದೇ ವೃಷಭಲಗ್ನಕ್ಕೆ ಇರುವುದಿಲ್ಲ.

ಮಾದರಿ ೨

| ಲಗ್ನ | ಶುಕ್ರ | ಕೇತು | |
|---|---|---|---|
| ರವಿ ಬುಧ ಚಂದ್ರ ಶನಿ | ಮೀನಲಗ್ನದ ಜಾತಕ | | |
| | | | |
| ಗುರು | ಮಂ ರಾಹು | | |

| | ಶುಕ್ರ | ಕೇತು | |
|---|---|---|---|
| ಲಗ್ನ ರವಿ ಶನಿ ಬುಧ ಚಂದ್ರ | ಕುಂಭಲಗ್ನದ ಜಾತಕ | | |
| | | | |
| ಗುರು | ಮಂ ರಾಹು | | |

ಶಕ ೧೮೫೮ನೇ ಧಾತೃನಾಮ ಸಂವತ್ಸರದ ಮಾಘಕೃಷ್ಣ ಅಮಾವಾಸ್ಯೆ ದಿ ೧೨-೩-೧೯೩೭ ನೇ ಮುಂಜಾನೆ ೬ ಗಂಟೆ ೪೦ ನಿಮಿಷಕ್ಕೆ (ಸ್ಟ್ಯಾ. ಟಾ.) ಜನನವಾಗಿದೆ. ಹಾಗೂ ರವಿ-ಶನಿಯ ಅಂಶಾತ್ಮಕ ಯುತಿಯೋಗವಿದೆ.

ಇಲ್ಲಿ ಆ ವ್ಯಕ್ತಿಯ ಜನ್ಮರಾಶಿ ಕುಂಭವಿದ್ದು ಲಗ್ನ ಮಾತ್ರ ಮೀನ ಲಗ್ನವೋ ಅಥವಾ ಕುಂಭಲಗ್ನವೋ ಎಂಬುದನ್ನು ನಿರ್ಣಯಿಸಬೇಕಾಗಿದೆ.

ಆ ವ್ಯಕ್ತಿ ಜೀವನದಲ್ಲಿ ಮಹತ್ವದ ಘಟನೆಗಳು ಹಾಗೂ ವ್ಯಕ್ತಿತ್ವ, ಶಿಕ್ಷಣ ಮೊದಲಾದವುಗಳು ಈ ಕೆಳಗಿನಂತಿರುತ್ತವೆ.

೧. ಈ ವ್ಯಕ್ತಿಯ ಶಿಕ್ಷಣವೆಂದರೆ ಇಂಜನಿಯರಿಂಗ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಹಾಗೂ ವಿಶ್ವವಿದ್ಯಾಲಯಕ್ಕೆ ಪ್ರಥಮ ಸ್ಥಾನದಲ್ಲಿ ೧೯೫೯ ರಲ್ಲಿ ತೇರ್ಗಡೆಯಾಗಿರುವನು.

೨. ದುರ್ಬಲ ಪ್ರಕೃತಿ ಹಾಗೂ ಸದಾ ರೋಗಪೀಡಿತ (ರೋಗಿಷ್ಟ) ಮತ್ತು ಅನೇಕ ಶಸ್ತ್ರಚಿಕಿತ್ಸೆ ಹೊಂದಿದವ.

೩. ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡಿರುವವ.

೪. ಗೋಚರಿಯಿಂದ ಶನಿಯು ಕುಂಭದಲ್ಲಿ ಪರಿಭ್ರಮಣ ಮಾಡುವಾಗ ಅಂದರೆ ೧೯೬೫-೧೯೬೬ ರಲ್ಲಿ ರೋಗದ ಉಲ್ಬಣ ಪ್ರಖರತೆಯು ತೀವ್ರವಾಗಿತ್ತು.

ಮೇಲಿನ ಈ ಎಲ್ಲ ವಿಷಯ ಹಾಗೂ ಘಟನೆಗಳ ಮೇಲಿಂದ ಆ ವ್ಯಕ್ತಿಯ ಜಾತಕವು ಕುಂಭಲಗ್ನವೆಂದು ನಿಶ್ಚಿತವಾಗುತ್ತದೆ. ಇದಕ್ಕೆ ಈ ಕೆಳಗಿನಂತೆ ವಿವರಣೆ ಕೊಡಲಾಗಿದೆ—

೧. ಕುಂಭಲಗ್ನದ ಪ್ರಕಾರ ಪಂಚಮೇಶನಾದ ಬುಧನು ಲಗ್ನದಲ್ಲಿ ಮಿತ್ರಕ್ಷೇತ್ರದಲ್ಲಿಯೂ ಇದ್ದಾನೆ. ಇದಲ್ಲದೇ ದ್ವಿತಿಯೇಶನಾದ ಗುರುವು ಪಂಚಮಸ್ಥಾನವನ್ನು ನೋಡುತ್ತಿದ್ದಾನೆ ಮತ್ತು ೧೯೫೯ರಲ್ಲಿ ಗೋಚರಿಯಿಂದ ಶನಿಯು ಹನ್ನೊಂದನೇಯವನಾಗಿಯೂ ಗುರುವು ಒಂಭತ್ತನೇಯವನಾಗಿಯೂ ಬಂದಿದ್ದರು ಈ ಎಲ್ಲ ಕಾರಣದಿಂದಾಗಿ ವಿಶ್ವವಿದ್ಯಾಲಯಕ್ಕೆ ಪ್ರಪ್ರಥಮವಾಗಿ ತೇರ್ಗಡೆಯಾಗಲು ಕಾರಣವಾಯಿತು. ಈ ಎಲ್ಲ ಸಂಗತಿಗಳು ಮೀನಲಗ್ನಕ್ಕೆ ಅನ್ವಯಿಸುವದಿಲ್ಲ.

೨. ಕುಂಭಲಗ್ನದ ಪ್ರಕಾರ ಅನೇಕ ಗ್ರಹಗಳು ಲಗ್ನದಲ್ಲಿರುವವು ಮತ್ತು ರವಿ-ಶನಿಯರ ಅಂಶಾತ್ಮಕ ಯುತಿಯೋಗ, ಚಂದ್ರ-ಶನಿಯರ ಯುತಿ ಯೋಗ ಇರುವುದಲ್ಲದೇ ಶನಿ, ಮಂಗಳರ ಅಶುಭ ದೃಷ್ಟಿಯೋಗವೂ ನಿರ್ಬಲ ಷಷ್ಠೇಶನೂ ಇರುವನು. ಈ ಎಲ್ಲ ಕಾರಣದಿಂದ ಈ ಜಾತಕನು ದುರ್ಬಲ ಪ್ರಕೃತಿಯುಳ್ಳವನಿದ್ದು, ಸದಾ ರೋಗಪೀಡಿತನಾರುವುದು ಆಶ್ಚರ್ಯವೇನಿಲ್ಲ. ಈ ಎಲ್ಲ ಸಂಗತಿಗಳು ಮೀನಲಗ್ನಕ್ಕೆ ಅನ್ವಯಿಸುವುದಿಲ್ಲ.

ಶನಿ-ಮಂಗಳರ ಅಶುಭ ದೃಷ್ಟಿಯೋಗ ಮತ್ತು ರವಿ-ಶನಿ, ಚಂದ್ರ-ಶನಿಯರ ಯುತಿಯೋಗ ಲಗ್ನದಲ್ಲಿರುವುದು ಶಸ್ತ್ರಚಿಕಿತ್ಸೆಗೆ ಕಾರಣವಾಗಿದೆ.

೩. ಕುಂಭಲಗ್ನಕ್ಕೆ ಪಿತೃಕಾರಕನಾದ ರವಿಯು ಶತ್ರುಕ್ಷೇತ್ರದಲ್ಲಿ ದ್ದಾನೆ.ರಾಹು-ಕೇತುಗಳು ಚತುರ್ಥ-ದಶಮದಲ್ಲಿದ್ದಾರೆ ಹಾಗೂ ಶನಿ-ಮಂಗಳರ ಅಶುಭ ದೃಷ್ಟಿಯೋಗ ಈ ಎಲ್ಲ ಕಾರಣಗಳು ಪಿತೃಸೌಖ್ಯದ ಅಭಾವವನ್ನು ದರ್ಶಿಸುತ್ತವೆ.

೪ ಗೋಚರಿಯಿಂದ ಶನಿಯು ಕುಂಭದಲ್ಲಿ ಪರಿಭ್ರಮಣ ಮಾಡ ವಾಗ ಮೂಲ ರವಿಯ ಮೇಲೆ ಅಂಶಾತ್ಮಕ ಪರಿಭ್ರಮಣ, ಲಗ್ನದ ಮೇಲಿಂದಲೂ ಪರಿಭ್ರಮಣ ಮೇಲಾಗಿ "ಸಾಡೇಸಾತಿ"ಯ ಪ್ರಭಾವ. ಷಷ್ಠೇಶನ ಮೇಲಿಂದ ಪರಿಭ್ರಮಣ ಮೂಲ ಮಂಗಳನೊಡನೆ ಕೇಂದ್ರ ಯೋಗ ಈ ಎಲ್ಲ ಸಂಗತಿಗಳು ೧೯೬೬-೬೭ ರಲ್ಲಿ ಜರುಗಿದ್ದರಿಂದ ರೋಗದ ಉಲ್ಬಣಕ್ಕೆ ಕಾರಣವಾಯಿತು.

ಈ ಎಲ್ಲ ಕಾರಣಗಳು ಕುಂಭಲಗ್ನಕ್ಕೆ ಪೂರಕವಿರುವುದಲ್ಲದೇ ಮೀನ ಲಗ್ನಕ್ಕೆ ಪೂರಕವಾಗಿರುವುದಿಲ್ಲ.

## ಮಾದರಿಯ ಕುಂಡಲಿ ೩

ಜನನ ದಿನಾಂಕ, ತಿಂಗಳು, ಇಸ್ವಿಸನ್ ಯಾವುದೂ ನಿಶ್ಚಿತವಿರದ ಜನರು ಹೇಳುವ ಸಂಗತಿಗಳಿಂದಲೇ ಜಾತಕವನ್ನು ತಯಾರಿಸುವ ಹಾಗೂ ನಿರ್ಧರಿಸುವ ವಿಧಾನವನ್ನು ಈ ಕೆಳಗಿನಂತೆ ವಿವರಿಸಲಾಗಿದೆ—.

ಗೌರೀಹುಣ್ಣಿಮೆ ಆದ ೧೧ನೇ ದಿನ ಶುಕ್ರವಾರ ರಾತ್ರಿ ೧೨ ಗಂಟೆಗೆ ಜನನವಾಗಿದೆ. ಇಸ್ವಿ ೧೯೨೫ ರಿಂದ ೨೮ ರ ಒಳಗೆ ಇರಬಹುದು ಎಂದು ಪಾಲನೆ ಮಾಡಿದ ಸಾಕುತಾಯಿಯಿಂದ ತಿಳಿದುಬಂದ ವಿವರಗಳು.

ಈ ವ್ಯಕ್ತಿಯ ಜೀವನದಲ್ಲಿಯ ಘಟನೆಗಳು ಈ ಕೆಳಗಿನಂತಿವೆ.

೧. ತಾಯಿ ತಂದೆ ಬಲು ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡಿರುವರು ಹಾಗೂ ಸಹೋದರ ಸಹೋದರಿಯರು ಯಾರೂ ಇರವುದಿಲ್ಲ. ಮತ್ತು ಬೇರೊಬ್ಬ ಆಪ್ತೇಷ್ಟರಲ್ಲಿ ಪೋಷಿಸಲ್ಪಟ್ಟಿರುವನು.

೨. ಅನೇಕ ಅಪಘಾತಗಳಾಗಿವೆ.

೩. ಸಾಹಿತ್ಯ, ಸಂಗೀತದಲ್ಲಿ ಅಭಿರುಚಿ.

೪. ಶಿಕ್ಷಣ:— ೧೯೪೫ ರಲ್ಲಿ ಮೆಟ್ರಿಕ್‌ನಲ್ಲಿ ಅನುತ್ತೀರ್ಣನಾಗಿ ೯ ವರ್ಷಗಳ ವರೆಗೆ ವಿದ್ಯಾರ್ಜನೆ ಅರ್ಧಕ್ಕೆ ನಿಂತು ೧೯೫೬ ರಲ್ಲಿ ಪುನಃ ಮೆಟ್ರಿಕ್ ಮುಗಿಸಿ ಶಿಕ್ಷಣವನ್ನು ಮುಂದುವರಿಸಿ ೧೯೬೨ M. A ಪದವೀಧರರಾಗಿರುವನು.

೫. ೧೯೬೩-೬೪ ರಲ್ಲಿ ಕಾಲೇಜಿನಲ್ಲಿ ಅಧ್ಯಾಪಕರೆಂದು ಶೈಕ್ಷಣಿಕ ವೃತ್ತಿಯನ್ನು ಸ್ವೀಕರಿಸಿ ಉದ್ಯೋಗದಲ್ಲಿ ಸ್ಥಿರತೆ (Established)

೬. ಪಾಲನೆ ಮಾಡಿದ ಸ್ತ್ರೀಯಿಂದ ಆಸ್ತಿ ಲಭಿಸಿತು. ( ಆಕಸ್ಮಿಕ ಧನಲಾಭವಾಗಿದೆ.)

ಸ್ವಭಾವ, ನಡತೆ, ಮುಖಲಕ್ಷಣಗಳು ಈ ಕೆಳಗಿನಂತೆ ಇವೆ.

೧. ಬಹು ಮಾತುಗಾರ (ವಾಚಾಳಿ), ತಿಂಡಿ, ತಿನಿಸು, ಊಟ ಬಹಳ ಹಾಗೂ ಮೇಲಿಂದ ಮೇಲೆ ತಿನ್ನುವವನು (ಹೊಳಬಕ್ಕ), ಆತ್ಮಸ್ತುತಿ ಹಾಗೂ ಮಾತಿನಲ್ಲಿ ಆತ್ಮಪೌರುಷ ಹೆಚ್ಚು.

೨. ಆನೆಯಂತೆ ತಲೆಯನ್ನು ಅಲುಗಾಡಿಸುತ್ತ ನಡೆಯುವನು

೩. ಬೌಳುಮೋರೆ, ದಂತಪಂಕ್ತಿ ಸರಳ, ದೊಡ್ಡ ಕಣ್ಣುಗಳು. ಹಾಗೂ ಹಾಗೂ ಉದ್ದ ಕಿವಿಗಳು, ಪ್ರಸನ್ನದ ಗಲ್ಲಗಳು. ಹಾಗೂ ವಯಸ್ಸಾದರೂ ಚಿಕ್ಕವರಂತೆ ಕಾಣುವ ವ್ಯಕ್ತಿತ್ವ.

ಮೇಲಿನ ಈ ಎಲ್ಲ ಸಂಗತಿ ಹಾಗೂ ಘಟನೆಗಳ ಮೇಲಿಂದ ಆ ವ್ಯಕ್ತಿಯ ಜನನ ೧೮೬೭ ನೇಯ ಪ್ರಭವನಾಮ ಸಂವತ್ಸರದ ಕಾರ್ತಿಕ ಬಹುಳ ದಶಮಿ ಶುಕ್ರವಾರ ದಿ. ೧೫-೧೧-೧೮೬೭ ನೇ ರಾತ್ರಿ ೧೨ ಗಂಟೆಗೆ (ಸ್ಟ್ಯಾಂ. ಟಾ.) ಸಿಂಹಲಗ್ನದ ಕನ್ಯಾರಾಶಿಯಲ್ಲಿ ಆಗಿದೆ ಎಂದು ನಿರ್ಧರಿಸಬಹುದು. ಈ ಜಾತಕ ಹೀಗಿದೆ.

| | | | |
|---|---|---|---|
| ಗುರು | | ರಾಹು | |
| | ಸಿಂಹ ಲಗ್ನದ ಜಾತಕ | | |
| | | | ಲಗ್ನ |
| | ರವಿ ಶನಿ ಕೇತು | ಮಂ. ಬುಧ | ಶುಕ್ರ ಚಂದ್ರ |

ಇದರ ವಿವರಣೆ ಈ ಕೆಳಗಿನಂತಿದೆ—

೧. ಗೌರೀಹುಣ್ಣಿಮೆ ಆದ ೧೦ನೇಯ ದಿನ ಹಾಗೂ ಅಂದು ಶುಕ್ರವಾರ ಇದು ೧೮೬೫-೬೬ ಮತ್ತು ೬೮ ಈ ಯಾವ ವರ್ಷದಲ್ಲಿಯೂ ಬಾರದೆ ೧೮೬೭ ನೇಯ ನವ್ಹೆಂಬರ ೧೫ ಇರುತ್ತದೆ.

೨. ಈ ಜಾತಕದ ಚತುರ್ಥ ಸ್ಥಾನದಲ್ಲಿ ಶನಿ-ರವಿ-ಕೇತು ಗ್ರಹಗಳ ಅಶುಭಯೋಗವು ಮಾತೃಸೌಖ್ಯದ ಅಭಾವವನ್ನು ದರ್ಶಿಸುತ್ತದೆ. ಇದರಂತೆಯೇ ದಶಮದಲ್ಲಿ ರಾಹು ಹಾಗೂ ದಶಮೇಶನು ನೀಚರಾಶಿಯವನಾಗಿಯೂ ಇದ್ದು ದಶಮ ಸ್ಥಾನದ ಮೇಲೆ ಶನಿ, ಕೇತುಗಳ ಅಶುಭದೃಷ್ಟಿಯು ಪಿತೃಸೌಖ್ಯಕ್ಕೆ ಪ್ರತಿಕೂಲವನ್ನು ತೋರಿಸುತ್ತದೆ.

೩. ೧೯೪೨ ರಿಂದ ೧೯೫೭ ರ ವರೆಗೆ ಈ ಜಾತಕನಿಗೆ "ಸಾಡೇಸಾತಿ" ಇರುವುದಲ್ಲದೆ ಗೋಚರಿಯಿಂದ ಶನಿಯ ಪರಿಭ್ರಮಣವು ಚಂದ್ರ, ಮಂಗಳ-ರವಿಯರ ಮೇಲಿಂದ ಆಗಿರುವುದರಿಂದ ಶಿಕ್ಷಣಕ್ಕೆ ವ್ಯತ್ಯಯ. ವಿಘ್ನ ಬಂದಿದ್ದು ತಂದೆ-ತಾಯಿಗಳ ವಿರಹಕ್ಕೂ ಕಾರಣವಾಗಿದೆ.

೪. ೧೯೫೭ ರಿಂದ ಗೋಚರಿಯಿಂದ ಬಂದ ಮೂರನೇಯ ಶನಿ ಹಾಗೂ ಜನ್ಮಸ್ಥ ಮತ್ತು ಎರಡನೇ ಗುರುವಿನ ಪ್ರಭಾವದಿಂದ ಮತ್ತೆ ಶಿಕ್ಷಣ ಮುಂದುವರಿದಿದೆ.

೫. ೧೯೬೩-೬೪ ರಲ್ಲಿ ೬ ನೇ ಶನಿ ಹಾಗೂ ೯ನೇ ಗುರುವಿನ ಪ್ರಭಾವ (ಗೋಚರಿ) ದಿಂದ ವೃತ್ತಿಯ ಸ್ಥೈರ್ಯ.

೬. ಈ ಜಾತಕದ ಪ್ರಕಾರ ಪಂಚಮೇಶ-ಅಷ್ಟಮೇಶನಾದ ಗುರು ಅಷ್ಟಮದಲ್ಲಿದ್ದು ಚಂದ್ರ-ಶುಕ್ರರೊಂದಿಗೆ ಪ್ರತಿಯೋಗವನ್ನು ಲಾಭೇಶ, ದಶಮೇಶನಾದ ಬುಧನೊಂದಿಗೆ ತ್ರಿಕೋಣಯೋಗವೂ ಆಕಸ್ಮಿಕ ಧನಲಾಭವನ್ನು ದರ್ಶಿಸುತ್ತದೆ.

೭. ನಡೆಯುವಾಗ ಆನೆಯಂತೆ ತಲೆಯಲ್ಲಾಡಿಸುವುದು ಮತ್ತು ಬಹು ಮಾತುಗಾರಿಕೆಯು, ತಿನ್ನುಣ್ಣುವುದರಲ್ಲಿ ಅತೀ ಆಸ್ಥೆಯು ಮೊದಲಾದ ಗುಣಗಳು ಕನ್ಯಾರಾಶಿಯ ಜನರ ಸ್ವಭಾವವನ್ನು ಸೂಚಿಸುತ್ತದೆ.

೮. ಸಿಂಹಲಗ್ನವಿದ್ದುದರಿಂದ ದುಂಡಾದ ಮುಖವಿರಬೇಕಾಗಿತ್ತು ಆದರೆ ಕರ್ಕಲಗ್ನದ ಕೊನೆಯ ಅಂಶವೂ ಸಿಂಹಲಗ್ನದ ಪ್ರಾರಂಭವೂ ಇದ್ದು ಸಂದಿಗ ಲಗ್ನವಿರುವುದರಿಂದ ಮುಖಲಕ್ಷಣವು ಬೇರಾಗಿರುವುದು

೯. ಕಣ್ಣುಗಳು ದೊಡ್ಡವಿರುವುದು ಹಾಗೂ ದಂತಪಂಕ್ತಿಗಳು ಸರಳವಿರುವುದು ಮತ್ತು ವಯಸ್ಸಾದರೂ ಚಿಕ್ಕವರಂತೆ ಕಾಣುವ ಈ ಲಕ್ಷಣಗಳು ಕನ್ಯಾರಾಶಿಯ ಜನರವಿರುತ್ತವೆ.

೧೧. ಉಚ್ಚ ರವಿಗಳು ಇರುವುದು ಮೀನರಾಶಿಯ ಗುರುವಿನ ಲಕ್ಷಣವು ಪ್ರರಿಸಿದ ಗಲ್ಲಗಳಿರುವುದು ತುಲಾ ರಾಶಿಯಲ್ಲಿ ಮಂಗಳನಿರುವ ಲಕ್ಷಣವು ಇರುತ್ತದೆ.

ಈ ಎಲ್ಲ ಲಕ್ಷಣ ಹಾಗೂ ಘಟನೆಗಳ ಮೇಲಿಂದ ಈ ವ್ಯಕ್ತಿಯು ಜನನ ದಿ. ೧೫-೧೧-೧೯೨೬ ರಂದು ಸಿಂಹಲಗ್ನದ ಕನ್ಯಾರಾಶಿಯಲ್ಲಿ ಆಗಿದೆ ಎಂದು ಹೇಳಬಹುದು.

ಮಾದರಿ ೪

ಜನನ ದಿನಾಂಕ, ತಿಂಗಳು ಇಸ್ವಿ ಇವು ಯಾವುದೂ ಇರದೇ ಕೇವಲ ಅವರು ಮಾತನಾಡುವ ಸಂಗತಿಗಳ ಮೇಲಿಂದಲೂ ಅವರ ಜೀವನದಲ್ಲಿಯ ಘಟನೆಗಳ ಮೇಲಿಂದಲೂ ಮುಖಲಕ್ಷಣಗಳ ಮೇಲಿಂದಲೂ ಜಾತಕವನ್ನು ತಯಾರಿಸುವ, ನಿರ್ಧರಿಸುವ ವಿಧಾನವನ್ನು ಈ ಕೆಳಗಿನಂತೆ ಕೊಡಲಾಗಿದೆ.

ಅವರ ಭಾಷೆಯಲ್ಲಿಯ ಮಾತುಗಳು

"ಕಾಲಯುಕ್ತ ಸಂವತ್ಸರವಿತ್ತು. ಸುನೇದ ತಿಂಗಳು, ಅಮಾವ್ಯಾಸೆಯ ಮುನ್ನಾದಿನ, ಬೇಸ್ತ್ರುರ, ಬೆಳಕ ಹರಿಯೂಕ ಯಲ್ಡ ತಾಸು ಕಮ್ಮಿತ್ತು ಬೆಳ್ಳಿಗತಾ ಹೋಗಿತ್ತು" ಈ ಸಂಗತಿಗಳು ನಿರಕ್ಷರೀ ತಾಯಿ ತನ್ನ ಮಗನ ಜನ್ಮದ ವಿಷಯವಾಗಿ ಕೊಟ್ಟ ವಿವರಣೆಯು

ಇಂಥ ಜನರ ಜಾತಕವನ್ನು ತಯಾರಿಸುವ ಪೂರ್ವದಲ್ಲಿ ಅವರಾಡುವ ಮಾತುಗಳಿಗೆ ಶಾಸ್ತ್ರೀಯ ಶಬ್ದಾರ್ಥವನ್ನು ಮಾಡಬೇಕು.

೧. ಹಳ್ಳಿ-ಗ್ರಾಮದಲ್ಲಿ ಪೌಷ ಮಾಸಕ್ಕೆ "ಸುನೆ ತಿಂಗಳು" ಎಂದು ಕರೆಯುವ ಪರಿಪಾಠವಿದೆ.

೨. (ಬೃಹಸ್ಪತಿವಾರ) ಗುರುವಾರಕ್ಕೆ "ಬೇಸ್ತ್ರಾರ" ಎಂದು ಕರೆಯುವ ರೂಢಿಯುಂಟು.

೩. "ಬೆಳ್ಳಿಗತ" ಎಂದರೆ ಶುಕ್ರಾಸ್ತವು. ಹಳ್ಳಿ-ಗ್ರಾಮದಲ್ಲಿ ಶುಕ್ರ ಗ್ರಹನಿಗೆ ಬೆಳ್ಳಿ, ಚಿಕ್ಕಿ ಎಂತಲೂ, ಅಸ್ತವಾಗುವುದಕ್ಕೆ "ಗತ" ಎಂತಲೂ

ಎನ್ನುವರು. "ವೆಳ್ಳಿಗತ" ಮುಗಿದಿತ್ತು ಎಂದರೆ ಶುಕ್ರಾಸ್ತದ ಅವಸ್ಥೆ ಮುಗಿದು ಶುಕ್ರೋದಯ ಕಾಲವು.

೪. "ಬೆಳಕ ಹರಿಯಾಕ ಯಲ್ಡ ತಾಸು ಕಮ್ಮಿ ಇತ್ತು" ಎಂದರೆ ಸೂರ್ಯೋದಯದ ಮೊದಲಿನ ಎರಡು ತಾಸು.

೫. "ಅಮಾಸಿ ಮುನ್ನಾದಿನ" ಎಂದರೆ ಕೃಷ್ಣಪಕ್ಷದ ಚತುರ್ದಶಿ.

೬. "ಕಾಲಯುಕ್ತ ಸಂವತ್ಸರ" ಎಂದರೆ ಶಾಲಿವಾಹನ ಶಕೆಯ ೧೮೪೦ ನೇ ವರುಷ.

ಈ ಎಲ್ಲ ಮಾತಿನಿಂದ ಈ ವ್ಯಕ್ತಿಯ ಜನನ ಸಮಯು ಹೀಗಿದೆ— ೧೮೪೦ ನೇ ಕಾಲಯುಕ್ತ ಸಂವರದ ಪೌಷ್ಯ ಕೃಷ್ಣ ತ್ರಯೋದಶಿಯುಕ ಚತುರ್ದಶಿ ಬುಧವಾರದ (ಗುರುವಾರ ಪ್ರಾತಃಕಾಲೆ) ದಿ. ೩೦-೧-೧೯೧೯ ನೆ ಯಃ ಇಷ್ಟು ಸುಮಾರು ೫ ಗಂಟೆ ಸಮಯ.

ಇನ್ನು ಆ ವ್ಯಕ್ತಿಯ ಜೀವನದಲ್ಲಿ ಸಂಗತಿ ಹಾಗೂ ಘಟನೆಗಳು ಹಾಗೂ ಮುಖಲಕ್ಷಣಗಳು ಈ ಕೆಳಗಿನಂತಿವೆ—

೧. ಈ ವ್ಯಕ್ತಿಯು ಲಕ್ಷಾಧೀಶನಿರುವನು.

೨. ಈ ವ್ಯಕ್ತಿಯು ಸ್ವತಂತ್ರ ಉದ್ಯೋಗ (ವ್ಯಾಪಾರ) ದಲಾಲಿ, ಕಿರಾಣಿ, ಸ್ಟೇಶನರಿ ಹೀಗೆ ಮೂರು ಪ್ರಕಾರದ ವ್ಯಾಪಾರದಿಂದ ಧನಾರ್ಜನೆ.

೩. ಚಿಕ್ಕ ವಯಸ್ಸಿನಲ್ಲಿ ವಿವಾಹವಾಗಿದ್ದು ಪತ್ನಿಯ ಕಡೆಯಿಂದ ಆರ್ಥಿಕ ಲಾಭವಾಗಿದೆ.

೪. ಇವನು ಎತ್ತರವಾದ ದೇಹ, ಅಜಾನುಬಾಹು, (ಸ್ಥೂಲದೇಹ) ದುಂಡಾದ ಮುಖ, ಹಸನ್ಮುಖಿ. ಸಣ್ಣ ಕಿವಿ, ದೊಡ್ಡದಾದ ಕಣ್ಣುಗಳು, ಚಪ್ಪಟೆ ಮೂಗು, ದಪ್ಪವಾದ ತುಟಿಗಳು, ದೊಡ್ಡದಾದ ಹಲ್ಲುಗಳು, ಸಾಧಾರಣ ಗಲ್ಲಗಳು ಈ ಎಲ್ಲ ಮುಖಲಕ್ಷಣಗಳುಳ್ಳವನಿದ್ದು ಅಧಿಕಾರವಾನ.

ದರ್ಪದಮಾತು, ನಿರ್ಣಯಾವಳಿವೇಶ, ಗಂಭೀರನಡಿಗೆ, ಮುಂತಾದ ಸ್ವಭಾವ ನಡತೆಯುಳ್ಳವನಿರುವನು.

ಮೇಲಿನ ಈ ಎಲ್ಲ ಸಂಗತಿ ಹಾಗೂ ಘಟನೆಗಳ ಮೇಲಿಂದ ಈ ವ್ಯಕ್ತಿಯು ಲಗ್ನ ಹಾಗೂ ರಾಶಿ "ಧನು" ಎಂದು ನಿರ್ಧರಿಸಬಹುದು. ಈ ಕೆಳಗಿನಂತೆ ಜಾತಕವನ್ನು ಖಚಿತಪಡಿಸಬಹುದು.

| | | | |
|---|---|---|---|
| | | ಕೇತು | ಗುರು |
| ಮಂ ಶುಕ್ರ | ಲಗ್ನ ಹಾಗೂ ರಾಶಿ "ಧನು" ಇರುತ್ತದೆ. | | ಶನಿ |
| ರವಿ ಬುಧ | | | |
| ಲಗ್ನ ಚಂದ್ರ | ರಾಹು | | |

ವಿವರಣೆ ಕೆಳಗಿನಂತಿರುತ್ತದೆ :—

೧. ಈ ಜಾತಕದ ಪ್ರಕಾರ ಭಾಗ್ಯೇಶ ಹಾಗೂ ದಶಮೇಶರ ಯುತಿ ಯೋಗವು ಧನಸ್ಥಾನದಲ್ಲಿ ಇದ್ದು, ಲಗ್ನೇಶ, ಚತುರ್ಥೇಶ, ಲಾಭೇಶರೊಂದಿಗೆ ತ್ರಿಕೋಣಯೋಗವೂ ಇರುತ್ತದೆ. ಇದಲ್ಲದೇ ಗುರು-ಚಂದ್ರರ ಪ್ರತಿಯೋಗ ಇದೆ. ಈ ಎಲ್ಲ ಕಾರಣಗಳಿಂದಾಗಿ ಈ ಜಾತಕನನ್ನು ಲಕ್ಷಾಧೀಶನನ್ನಾಗಿ ಮಾಡಿದೆ.

೨. ವ್ಯಾಪಾರೀಕಾರಕನಾದ ಬುಧನು ದಶಮೇಶನಾಗಿ ಭಾಗ್ಯೇಶರೊಂದಿಗೆ ಮಿತ್ರಕ್ಷೇತ್ರಯುತನಾಗಿ ದ್ವಿತೀಯದಲ್ಲಿದ್ದಾನೆ. ಹಾಗೂ ಸ್ವತಂತ್ರ ಉದ್ಯೋಗ

ಕಾರಕನಾದ ಷಷ್ಠೇಶನು ಮಿತ್ರಕ್ಷೇತ್ರದಲ್ಲಿದ್ದು ಲಗ್ನೇಶ, ಚತುರ್ಥೇಶನೊಂದಿಗೆ ತ್ರಿಕೋಣಯೋಗವನ್ನುಂಟು ಮಾಡುತ್ತಿದ್ದಾನೆ. ಈ ಎಲ್ಲ ಕಾರಣದಿಂದ ಇವರಿಗೆ ಸ್ವತಂತ್ರ ವ್ಯಾಪಾರೋದ್ಯೋಗವನ್ನು ಕೈಕೊಳ್ಳಲು ಹಚ್ಚಿದೆ.

೩. ಗುರುವು ಸಪ್ತಮದಲ್ಲಿಯೂ, ಸಪ್ತಮೇಶನು ಮಿತ್ರಕ್ಷೇತ್ರದಲ್ಲಿಯೂ ಇದ್ದು ಗುರು-ಶುಕ್ರರ ತ್ರಿಕೋಣಯೊಗ ಗುರು-ಚಂದ್ರರ ಪ್ರತಿಯೋಗವಿರುವುದರಿಂದಲೇ ಈ ಜಾತಕನಿಗೆ ಚಿಕ್ಕ ವಯಸ್ಸಿನಲ್ಲಿ ವಿವಾಹವಾಗಿದ್ದು ಪತ್ನಿಯಿಂದ ಆರ್ಥಿಕ ಲಾಭವಾಗಿದೆ. (ಆಕಸ್ಮಿಕ ಧನಯೋಗ.)

೪. ಆಜಾನುಬಾಹು. ದಪ್ಪವಾದ ಕುತ್ತಿಗೆ. ದೊಡ್ಡ ಹಲ್ಲುಗಳು, ಚಪ್ಪಟೆ ಮೂಗು. ಅಧಿಕಾರವಾಣಿ, ನಿರ್ಣಯದ ಆದೇಶ. ಗಂಭೀರ ನಡಿಗೆ ಈ ಎಲ್ಲ ಲಕ್ಷಣಗಳು ಧನುರಾಶಿಯ ಜನರವಿರುತ್ತವೆ.

೫. ಎತ್ತರ ದೇಹ. ಸ್ಥೂಲದೇಹ. ದುಂಡಾದ ಮುಖ ಇವು 'ಧನು' ಲಗ್ನದ ಲಕ್ಷಣಗಳಿರುತ್ತವೆ.

೬. ಕಿವಿಗಳು ಸಣ್ಣದಿರುವುದು ಮಿಥುನರಾಶಿಯ ಗುರುವಿನ ಲಕ್ಷಣವೂ, ಕಣ್ಣುಗಳು ದೊಡ್ಡವಿರುವುದು ಮಕರರಾಶಿಯ ರವಿಯ ಹಾಗೂ ಧನು ರಾಶಿಯ ಚಂದ್ರನ ಲಕ್ಷಣಗಳಿರುತ್ತವೆ.

ಈ ಎಲ್ಲ ಲಕ್ಷಣ ಹಾಗೂ ಘಟನೆಗಳ ಮೇಲಿಂದ ಈ ಜಾತಕನ ಲಗ್ನ ಹಾಗೂ ರಾಶಿ 'ಧನು' ಎಂದು ನಿರ್ಧರಿಸಬಹುದು.

॥ ಶುಭಮಸ್ತು, ಮಂಗಳಮಸ್ತು ॥

